# ಶಿವ ಸ್ತುತಿಃ



ಸಂಗ್ರಾಹಕರು

ತ್ರಿವೇದೀ ಉಂಡಾರು ಶ್ರೀನಿವಾಸಮೂರ್ತಿ ಆಚಾರ್ಯ



**Preserve Promote Distribute**
**Haridasa Works**

ಶ್ರೀ ನಾರಾಯಣ ಪಂಡಿತಾಚಾರ್ಯ ಕೃತ

# ಶಿವಸ್ತುತಿಃ



ಸಂಪಾದಕರು

ತ್ರಿವೇದೀ ಉಂಡಾರು ಶ್ರೀನಿವಾಸಮೂರ್ತಿ ಆಚಾರ್ಯ


ಪ್ರಕಾಶಕರು



Haridasa Chandrika

Preserve Promote Distribute Haridasa Works

**Shivastuthi :** Haridasa Chandrika. Foundation. Belgaum.

***PUBLISHER :***

Haridasa Chandrika Foundation
C/o Shri Rajendra Kulkarni, Advocate
Chidambar Nagar, Tilakawadi
Belgaum, Karnataka State, India
www.haridasachandrika.com
Email : info@haridasachandrika.com

***AUTHOR :***

TrivEdi Vidwan Shri UndArU ShrInivAs Murthy AchArya
Ph. : +91 94496 37111

***SALES :***



**Haridasa Chandrika**
**Preserve Promote Distribute Haridasa Works**

© Reserved

***First Edition :*** 2019, March

***Copies :*** 500

***Price :*** Rs. 60/- (in India) – Hard Copy ex postage
$ 1/- (int) – hard & downloadable
soft copy

***Cover page design & DTP by :***
Ramesha S.N. **e-mail :** rameshasn02@gmail.com

***PRINTED AT :*** Hari Om Printers, Bengaluru.



**Haridasa Chandrika**

**Preserve Promote Distribute Haridasa Works**

Haridasa Chandrika is a modest attempt to Preserve, Promote and Distribute Haridasa Sahitya with the following Objectives-

- Connect artists and consumers directly through *Internet Based Media Distribution.*
- Promote new Music Albums and Books based on *Sponsorship* from HDC members.
- Distribute existing and out-of-print works and passes payment to *Original* Publishers.
- Provide platform for talented and *Upcoming* artists to publish their works.
- Promote donations to renovation of spiritual places and supporting the needy for *Education & Health Services.*

**Web: www.haridasachandrika.com**

**Email : info@haridasachandrika.com**

## ಹರಿದಾಸ ಚಂದ್ರಿಕಾ ಪೌಂಡೇಶನ್ ಸಂಸ್ಥೆಯಿಂದ ಬಿಡುಗಡೆಯಾಗಿರುವ ಧ್ವನಿ ಸುರಳಿಗಳು

1. ರಕ್ಷಮಾಮ್ ರಂಗೇಶ (ಶ್ರೀಪಾದರಾಜರ ಕೃತಿಗಳು) : ಹಾಡಿದವರು – ಡಾ॥ ವಿದ್ಯಾಭೂಷಣ
2. ನಮೋ ವೆಂಕಟೇಶ (ಶ್ರೀ ಗುರುಜಗನ್ನಾಥದಾಸರ ಕೃತಿಗಳು):ಹಾಡಿದವರು–ಡಾ॥ ವಿದ್ಯಾಭೂಷಣ
3. ಶ್ರೀ ಗುರು ಜಗನ್ನಾಥದಾಸ ವಿರಚಿತ ಶ್ರೀ ವೆಂಕಟೇಶಸ್ತವರಾಜ ಮತ್ತು ಶ್ರೀ ಲಕ್ಷ್ಮೀ ಹೃದಯ : ಹಾಡಿದವರು – ಡಾ॥ ವಿದ್ಯಾಭೂಷಣ

---

## ಹರಿದಾಸ ಚಂದ್ರಿಕಾ ಪೌಂಡೇಶನ್ ಸಂಸ್ಥೆಯಿಂದ ಬಿಡುಗಡೆಯಾಗಿರುವ ಪುಸ್ತಕಗಳು

| # | Title of the Book | Lang | Author | Year |
|---|---|---|---|---|
| 1 | Vijayee Bhava - Biography of Shri Satyavijaya Teertha | Kannada | Vedavithala | 2013 |
| 2 | Nijavaada Vairagya bEku - Biagraphy of Shri Dheerendra Teertha | Kannada | Vedavithala | 2013 |
| 3 | Shri Harikathamrutasara – KaruNa Sandhiya vishleshane | Kannada | Vedavithala | 2013 |
| 4 | Pravratti Karma saaku Nivratti Karma Beku - Biography of Shri Satyapoorna Teertha | Kannada | Vedavithala | 2013 |
| 5 | Kastoori Tilaka - Biography of Shri Satyajnaana Teertha | Kannada | Vedavithala | 2014 |
| 6 | Harikathamrutasara – Shri Vighneshwara Sandhiya vishleshane | Kannada | Vedavithala | 2015 |
| 7 | Shri Sundarakanda | Kannada | Collection by Vedavithala | 2015 |
| 8 | Shri Madhwa-Vadiraja Samhite | Kannada | U.Shrinivasamurty Acharya | 2015 |

| | | | | |
|---|---|---|---|---|
| 9 | Harikathamrutasara – Sakala Durita Nivaarana Sandhiya Vishleshane | Kannada | Vedavithala | 2015 |
| 10 | Shri GuruJagannathadasa Virachita Shri Venkatesh Stavaraja and Shri Lakshmi Hryudaya – Parayana Book | Kannada | Collection by Vedavithala | 2015 |
| 11 | Shri Bhogaapuresh Mahime (Stotras and Padya). | Kannada | Shri BhogEsha acharya Poojar | 2015 & 2016 |
| 12 | Shat PrashnOpanishat (Bhaavi Sameera Shri Vadiraja Virachita Bhaashya Teeka Prakaashika | Kannada | U.Shrinivasamurty Acharya | 2016 |
| 13 | Shri Satyavijaya Teerthara Stotra Sangarha | Kannada | Collection by Shri Satyavijaya Acharya | 2016 |
| 14 | Shruti Tatva Prakaashika saara sangraha – Bhaavi Sameera Madhwadiraaja | Kannada | U.Shrinivasamurty Acharya | 2017 |
| 15 | Shri Satyadhyaana Teertha Gururmahan | Kannada | Vedavithala | 2017 |
| 16 | Bhaavi Sameera Shri Vadiraja virachita VivaraNa Gantha Saara – Sangraha. | Kannada & Sanskrit | U.Shrinivasamurty Acharya | 2018 |
| 17 | Shri Vaadiraja Stuti Manjari | Kannada | U.Shrinivasamurty Acharya | 2018 |
| 18 | Life Sketch of Shri Satyapoorna Teertha - namO series # 1 | English | Vedavithala | 2017 |
| 19 | Tatvavaada Pramoda Shri Satyapramoda Teertharu | Kannada | Vedavithala | 2018 |
| 20 | Shri Satyajnaana Teertha - namO series # 2 | English | Vedavithala | 2018 |
| 21. | Bhaavabodha Sarathi Shri Vedavyasa Teertha | Kannada | Vedavithala | 2019 |

| | | | | |
|---|---|---|---|---|
| 22 | Shiva Stuti | Kannada | U.Shrinivasamurty Acharya | 2019 |
| 23 | Palisayya Pavananayya | Kannada | Shrinivas S Mathad | 2019 Feb |
| 24 | Shri Vishnusahasranaama stotrada artha manjari - na osnovu Shri Vadirajateertha je LakshAlankara | Kannada | U.Shrinivasamurty Acharya | 2019 Mar. |




# ಗ್ರಂಥ ಸಮರ್ಪಣೆ

## ಶ್ರೀಮತಿ ಲೀಲಾವತಿ ಪಾಂಡುರಂಗ ಆಚಾರ್ಯ ಅವರಿಗೆ

[ತ್ರಿವೇದೀ ಉಂಡಾರು ಶ್ರೀನಿವಾಸಮೂರ್ತಿ ಆಚಾರ್ಯರ ಮಾತೃಶ್ರೀ]



**ಜನನ : 1952 – ಮರಣ : 2019**






# ॥ ಶ್ರೀ ನಾರಾಯಣ ಪಂಡಿತಾಚಾರ್ಯ ಕೃತ ಶಿವಸ್ತುತಿಃ ॥

ಸ್ಫುಟಂ ಸ್ಫಟಿಕಸಪ್ರಭಂ ಸ್ಫುಟಿತಹಾಟಕಶ್ರೀಜಟಂ
ಶಶಾಂಕದಲಶೇಖರಂ ಕಪಿಲಫುಲ್ಲನೇತ್ರತ್ರಯಮ್ ।
ತರಕ್ಷುವರಕೃತ್ತಿಮದ್ಭುಜಗಭೂಷಣಂ ಭೂತಿಮತ್
ಕದಾ ನು ಶಿತಿಕಂಠ ತೇ ವಪುರವೇಕ್ಷತೇ ವೀಕ್ಷಣಮ್ ॥ 1 ॥

*ಪದಾರ್ಥ :*

**ಸ್ಫಟಿಕ** = ಸ್ಫಟಿಕದಂತೆ, **ಸ್ಫುಟಂ** = ಚಿಮ್ಮಿದ (ಪುಟಗೊಂಡ), **ಸಪ್ರಭಮ್** = ಹೊಳೆಯುತ್ತಿರುವ ಪ್ರಭೆಯುಳ್ಳ, **ಸ್ಫುಟಿತ** = ಪುಟವಿಟ್ಟ (ಚಿಮ್ಮಿದ), **ಹಾಟಕ** = ಚಿನ್ನದಂತೆ, **ಶ್ರೀಜಟಂ** = ಕಾಂತಿಯುಕ್ತವಾದ ಜಡೆ, **ಶಶಾಂಕದಲ** = ಅರ್ಧಚಂದ್ರನೆ, **ಶೇಖರಮ್** = ತಲೆಗೆ ಭೂಷಣವಾಗುಳ್ಳ, **ಕಪಿಲ** = ನಸುಗೆಂಪು, **ಫುಲ್ಲ** = ಅರಳಿದ, **ನೇತ್ರತ್ರಯಮ್** = ಮೂರು ಕಣ್ಣುಗಳ್ಳುಳ್ಳ, **ತರಕ್ಷು** = ಹುಲಿಯ, **ವರ** = ಶ್ರೇಷ್ಠವಾದ, **ಕೃತ್ತಿಮದ್** = ಚರ್ಮವನ್ನು ಧರಿಸಿರುವ, **ಭುಜಗಭೂಷಣಂ** = ಹಾವೇ ಭೂಷಣವಾಗುಳ್ಳ, **ಭೂತಿಮತ್** = ಬೂದಿಯನ್ನು ಧರಿಸಿರುವ, **ಶಿತಿಕಂಠ** = ಕಪ್ಪಾದ ಕೊರಳಿನವನೇ, **ತೇ** = ನಿನ್ನ, **ವಪುಃ** = ಶರೀರವನ್ನು, **ಕದಾನು** = ಯಾವಾಗ ತಾನೇ, **ವೀಕ್ಷಣಮ್ ಅವೇಕ್ಷತೇ** = ನೋಡಿಯಾನು.

*ತಾತ್ಪರ್ಯಾರ್ಥ :*

ಸ್ಫಟಿಕಮಣಿಯಂತೆ ಹೊಳೆಯುತ್ತಿರುವ ಪ್ರಭೆಯುಳ್ಳ, ಪುಟವಿಟ್ಟ ಚಿನ್ನದಂತೆ ಕಾಂತಿಯಿಂದ ಕೂಡಿರುವ ಜಡೆಯುಳ್ಳ, ಅರ್ಧಚಂದ್ರನನ್ನು ತಲೆಗೆ ಭೂಷಣವಾಗಿ ಧರಿಸಿರುವ, ನಸುಗೆಂಪಿನಿಂದರಳಿದ ಮೂರು ಕಣ್ಣುಗಳುಳ್ಳ, ಶ್ರೇಷ್ಠವಾದ ಹುಲಿಯ ಚರ್ಮವನ್ನು ಧರಿಸಿರುವ, ಹಾವೇ ಭೂಷಣವಾಗುಳ್ಳ ಬೂದಿಯನ್ನು ಮೈಯ್ಯೆಲ್ಲ ಧರಿಸಿರುವ ಕಪ್ಪಾದ ಕೊರಳಿನವನೇ, ಶಿವನೇ, ನಿನ್ನೀ ರೂಪವನ್ನೆಂದು ತಾನೆ ನಾ ಕಂಡೇನು?

ತ್ರಿಲೋಚನ ವಿಲೋಚನೇ ಲಸತಿ ತೇ ಲಲಮಾಯಿತೇ
ಸ್ಮರೋ ನಿಯಮಘಸ್ಮರೋ ನಿಯಮಿನಾಮಭೂದ್ಭಸ್ಮಸಾತ್ ।
ಸ್ವಭಕ್ತಿಲತಯಾ ವಶೀಕೃತವತೀ ಸತೀಯಂ ಸತೀ
ಸ್ವಭಕ್ತವಶಗೋ ಭವಾನಪಿ ವಶೀ ಪ್ರಸೀದ ಪ್ರಭೋ ॥ 2 ॥

*ಪದಾರ್ಥ :*

**ತ್ರಿಲೋಚನ** = ಮೂರು ಕಣ್ಣುಗಳುಳ್ಳವನೇ, **ತೇ** = ನಿನ್ನ ವಿಶೇಷವಾದ ಮೂರನೆಯ ಕಣ್ಣು, **ಲಲಾಮಾಯಿತೇ** = ಹಣೆಯ ಮೇಲಿರುವುದು, **ಲಸತಿ** = ಶೋಭಿಸುತ್ತಿದೆ ಹೀಗಿರುವಾಗ, **ನಿಯಮಿನಾಮ್** = ನಿಯಮದಿಂದ ಇರುವ ಸಾಧಕರ, **ನಿಯಮ** = ನಿಯಮಗಳನ್ನು, **ಘಸ್ಮರ** = ನಾಶಪಡಿಸುವ, **ಸ್ಮರ** = ಮನ್ಮಥನೂ, **ಭಸ್ಮಸಾತ್ ಅಭೂತ್** = ಭಸ್ಮವಾದನು, **ಇಯಂ ಸತೀ** = ಈ ನಿನ್ನ ಪತ್ನಿಯಾದ, **ಸತೀ** = ದಾಕ್ಷಾಯಣಿಯು, **ಸ್ವ-ಭಕ್ತಿಲತಯಾ** = ತನ್ನ ಭಕ್ತಿಯೆಂಬ ಬಳ್ಳಿಯಿಂದ, **ವಶೀಕೃತವತೀ** = ವಶಪಡಿಸಿಕೊಂಡಳು, ಆದಳು, **ವಶೀ** = ಎಲ್ಲವನ್ನೂ ನೀನು ವಶಪಡಿಸಿಕೊಂಡರೂ, **ಭವಾನ್** = ನೀನು, **ಸ್ವಭಕ್ತವಶಗಃ** = ನಿನ್ನ ಭಕ್ತರ ವಶನಾಗಿರುವಿ, **ಪ್ರಸೀದ ಪ್ರಭೋ** = ಪ್ರಸನ್ನನಾಗು ದೊರೆಯೇ.

*ತಾತ್ಪರ್ಯಾರ್ಥ :*

ಎಲೈ ಮುಕ್ಕಣ್ಣನೇ, ನಿನ್ನ ಮೂರನೆಯ ವಿಶೇಷವಾದ ಕಣ್ಣು ಹಣೆಯ ಮೇಲೆ ಶೋಭಿಸುತ್ತಿದೆ. ಜಪ-ತಪ ಇಂದ್ರಿಯ ನಿಗ್ರಹ ಮೊದಲಾದ ನಿಯಮಗಳುಳ್ಳ ಸಾಧಕರನ್ನು ದಾರಿತಪ್ಪಿಸುವ ಮನ್ಮಥನು ನಿನ್ನ ಮೂರನೇ ಕಣ್ಣಿನಿಂದ ಭಸ್ಮವಾಗಿರುವನು. ನಿನ್ನೀ ಮಡದಿ ದಾಕ್ಷಾಯಣಿಯು, ತನ್ನ ಭಕ್ತಿಯೆಂಬ ಬಳ್ಳಿಯಿಂದ ನಿನ್ನನ್ನು ವಶಪಡಿಸಿ-ಕೊಂಡಿರುವಳು. ಅವಳನ್ನು ನೀನು ವಶ ಮಾಡಿಕೊಂಡಿರುವೆ. ನೀನು ನಿನ್ನ ಭಕ್ತರ ವಶನಾಗಿರುವಿ, ನನ್ನ ದೊರೆಯೇ ಪ್ರಸನ್ನನಾಗು.

**ಮಹೇಶ ಮಹಿತೋಽಸಿ ತತ್ಪುರುಷ ಪೂರುಷಾಗ್ರ್ಯೋ ಭವಾ**
**ನಘೋರ ರಿಪುಘೋರ ತೇಽನವಮ ವಾಮದೇವಾಂಜಲಿಃ ।**
**ನಮಃ ಸಪದಿಜಾತ ತೇ ತ್ವಮಿತಿ ಪಂಚರೂಪೋಽಂಚಿತಃ**
**ಪ್ರಪಂಚಯ ಚ ಪಂಚವೃನ್ಮಮ ಮನಸ್ತಮಸ್ತಾಡಯ ॥ 3 ॥**

*ಪದಾರ್ಥ :*

**ಹೇ ಮಹೇಶ** = ಎಲೈ ಮಹೇಶನಾಮಕ ಶಿವನೇ, (ತ್ವಂ = ನೀನು), **ಮಹಿತಃ** = ದೇವತೆಗಳು ಮುನಿಗಳಿಂದ ಪೂಜಿತನು, **ಅಸಿ** = ಆಗಿರುವೆ, **ತತ್ಪುರುಷ** = ತತ್ಪುರುಷವೆಂಬ ಹೆಸರುಳ್ಳವನೇ, (ದೇವತೆಗಳಲ್ಲಿ ಪ್ರಸಿದ್ಧನಾದ ಪುರುಷನೆಂಬ ಹೆಸರುಳ್ಳವನೇ), **ಭವಾನ್** = ನೀನು, **ಪುರುಷಾಗ್ರಃ** = ಚೇತನರಲ್ಲಿ ಶ್ರೇಷ್ಠನು ಆಗಿರುವೆ, **ಹೇ ರಿಪುಘೋರ** = ಎಲೈ ಶತ್ರುಗಳಿಗೆ ಭಯಂಕರನೇ, **ಅಘೋರ** = ಘೋರವೆಂದರೆ ಅಮಂಗಲವು

ಅದು, ನ = ಇಲ್ಲದವನು, ಮಂಗಲವನ್ನುಂಟು ಮಾಡುವವನು, ಅಂತಹ ಅಘೋರನೇ, **ತೇ** = ನಿನಗೆ, ನಮಸ್ಕಾರವು ಇರಲಿ, **ಅನವಮ** = ಕೆಳಗುಂದದವನು ನೀನು ಆದುದರಿಂದ, **ಅನವಮ** = ದೇವಶ್ರೇಷ್ಠನು, **ವಾಮದೇವ** = ಸುಖದಿಂದ ಬೆಳಗುತ್ತಿರುವವನು, **ತೇ** = ನಿನಗೆ ಅಂಜಲಿಗಳಿಂದ ನಮಸ್ಕಾರವು ಇರಲಿ, **ಹೇ ಸಪದಿ ಜಾತ** = ಎಲೈ ಚತುರ್ಮುಖನ ಹಣೆಯಿಂದ ಉದ್ಭವಿಸಿದವನೇ, (ಸದ್ಯೋಜಾತನೇ), **ತೇ** = ನಿನಗೋಸ್ಕರ, **ನಮಃ** = ನಮಸ್ಕಾರವು ಇರಲಿ, **ಇತಿ** = ಹೀಗೆ, **ಪಂಚರೂಪ** = ಮಹೇಶ ಮೊದಲಾದ ಐದು ರೂಪಗಳಿಂದ, **ತ್ವಂ** = ನೀನು, **ಅಂಚಿತಃ** = (ನನ್ನಿಂದ) ಪೂಜಿತನಾಗಿ, **ಪಂಚವೃತ್** = ಐದು ವಿಧವಾಗಿ ಎಂದರೆ ಮನಸ್ಸನ್ನು, [ಬುದ್ಧಿ, ಅಹಂಕಾರ, ಚಿತ್ತ, ಚೇತನ, ಮನಸ್ಸು] ಇದೇ ವಿಧದಿಂದ, **ಮನಃ** = ಅಂತಃಕರಣವನ್ನು, **ಪ್ರಪಂಚಯ** = ವಿಸ್ತಾರವನ್ನಾಗಿ ಮಾಡು. [ಪರ ಅಪರ ವಸ್ತು ವಿಷಯವನ್ನು ವೃತ್ತಿ ರೂಪದ ಜ್ಞಾನವನ್ನು ಹೆಚ್ಚು ಮಾಡು], **ಚ** = ಮತ್ತು, **ಮಮ** = ನನ್ನ, **ತಮಃ** = ಅಜ್ಞಾನವನ್ನು, **ತಾಡಯ** = ನಾಶಮಾಡು.

*ತಾತ್ಪರ್ಯಾರ್ಥ :*

ನಿನಗೆ ಐದು ರೂಪಗಳಿವೆ. ಮಹೇಶ – ತತ್ಪುರುಷ – ಅಘೋರ – ವಾಮದೇವ – ಸದ್ಯೋಜಾತ ಎಂದು. ಮಹೇಶನೆನಿಸಿದ ಶಿವನೇ ನೀನು ದೇವತೆಗಳು ಮುನಿಗಳಿಂದ ಪೂಜಿತನು. ತತ್‌ಪುರುಷನೆಂಬ ಹೆಸರುಳ್ಳ ನೀನು, ಚೇತನರಲ್ಲಿ ಶ್ರೇಷ್ಠನು, ಶತ್ರುಗಳಿಗೆ ಭಯಂಕರ ನೆನಿಸಿದ ಅಘೋರನೇ ನೀನು, ಮಂಗಲವನ್ನುಂಟು ಮಾಡುವಿ. ನೀನು ದೇವಶ್ರೇಷ್ಠ ಸುಖದಿಂದ ಬೆಳಗುತ್ತಿರುವವನು. ನಿನಗೆ ನನ್ನೆರಡು ಹಸ್ತಗಳ ಅಂಜಲಿಯಿಂದ ನಮಸ್ಕರಿಸುವೆ.

ಎಲೈ ಸದ್ಯೋಜಾತನೆ, ನಿನಗೆ ನಮನವು. ಹೀಗೆ ಮಹೇಶ ಮೊದಲಾದ ಐದು ರೂಪಗಳಿಂದ ನೀನು ಪೂಜಿತನಾಗಿರುವೆ. ಬುದ್ಧಿ ಇತ್ಯಾದಿ 5 ವಿಧದ ನನ್ನ ಅಂತಃಕರಣವನ್ನು ಜ್ಞಾನದಿಂದ ಹೆಚ್ಚು ಮಾಡು.

**ರಸಾಘನರಸಾನಲಾನಿಲವಿಯದ್ವಿವಸ್ವದ್ವಿಧು**
**ಪ್ರಯಷ್ಟೃಷು ನಿವಿಷ್ಟಮಿತ್ಯಜ ಭಜಾಮಿ ಮೂರ್ತ್ಯಷ್ಟಕಮ್ ।**
**ಪ್ರಶಾಂತಮುತ ಭೀಷಣಂ ಭುವನಮೋಹನಂ ಚೇತ್ಯಹೋ**
**ವಪೂಂಷಿ ಗುಣಪುಂಷಿ ತೇಽಹಮಹಮಾತ್ಮನೋಽಹಂಭಿದೇ ॥ 4 ॥**

*ಪದಾರ್ಥ :*

ಹೇ ಅಜಃ = ಎಲೈ ರುದ್ರನೇ. [ಅ ನಾಮಕ ವಿಷ್ಣುವಿನಿಂದ ಸೂಕ್ಷ್ಮವಾದ ಸೃಷ್ಟಿಯಲ್ಲಿ,

**ಜಾಯತೇ** = ಹುಟ್ಟುತ್ತಾನೆ, [ಆದ್ದರಿಂದ ಅಜ ರುದ್ರನು], **ರಸಾ** = ಪೃಥಿವಿಯು, **ಘನರಸಮ್** = ನೀರು, **ಅನಲ** = ಅಗ್ನಿಯು, **ಅನಿಲ** = ವಾಯುವು, ವಿಯತ್ = ಆಕಾಶವು, **ವಿವಸ್ವತ್** = ಸೂರ್ಯನು, **ವಿಧು** = ಚಂದ್ರನು ಮತ್ತು, **ಪ್ರಯಷ್ಟಾ** = ಅಗ್ನಿಹೋತ್ರಿಯೂ, **ತೇಷು ಪ್ರಯುಷ್ಯಷು** = ಇವರುಗಳಲ್ಲಿ, **ನಿವಿಷ್ಟಂ** = ಅಂತರ್ಯಾಮಿಯಾಗಿ ರೂಪ ವಿಶೇಷದಿಂದ ಆವಿಷ್ಟನಾದವನು, **ಅಹಮಾತ್ಮನಃ** = ಅಹಂಕಾರ ತತ್ವವೇ ದೇಹವಾಗುಳ್ಳವನೇ, **ತೇ** = ನಿನ್ನ, **ಮೂರ್ತ್ಯಷ್ಟಕಮ್** = ಪೃಥಿವಿಯೇ ಮೊದಲಾದ ಎಂಟು ರೂಪಗಳುಳ್ಳವನೆ, **ಅಹಮ್** = ನಾನು ಎಂಬ ಅಹಂಕಾರವನ್ನು, **ಭಿದೇ** = ನಾಶ ಮಾಡುವವನೇ [ಸಂಸಾರವನ್ನು ನಾಶಗೊಳಿಸುವವನೇ], **ಭಜಾಮಿ** = ಸೇವಿಸುತ್ತೇನೆ, **ಉತ** = ಅನಂತರದಲ್ಲಿ, **ಪ್ರಶಾಂತಮ್** = ಹೆಚ್ಚಾದ ಶಾಂತಿಯುಳ್ಳ, [ತಪಸ್ಸನ್ನಾಚರಿಸಲು ಶಮ ದಮ ಮೊದಲಾದುದರಿಂದ ಕೂಡಿರುವ ಯಾವುದೋ ಒಂದು ರೂಪದಿಂದ ಹುಟ್ಟಿರುವ], **ಉತ** = ಅನಂತರ, **ಭೀಷಣಮ್** = ದುಷ್ಟರನ್ನು ನಾಶಪಡಿಸಲು ಭಯಂಕರವಾದ ಯಾವುದೋ ಒಂದು ರೂಪದಿಂದ ಹುಟ್ಟಿರುವ, **ಭುವನಮೋಹನಮ್** = ಅತ್ಯಂತ ಸುಂದರನಾದುದರಿಂದ ಪಾರ್ವತಿ ಮೊದಲಾದ ಜಗತ್ತನ್ನೇ ಮೋಹಗೊಳಿಸುವ, **ಇತಿ** = ಪ್ರಶಾಂತ ಮೊದಲಾದ ಮೂರು ಪ್ರಕಾರದಿಂದ, **ಅಹಮ್ ಭಿದೇ** = ಅಹಂಕಾರವನ್ನು ನಾಶಮಾಡುವವನನ್ನು, **ಭಜಾಮಿ** = ಸೇವಿಸುತ್ತೇನೆ, **ಅಹೋ** = ಆಶ್ಚರ್ಯವು, **ಉತ ತೇ** = ಅನಂತರ ನಿನ್ನ, **ವಪೂಂಷಿ** = ವೇದಪುರಾಣಗಳಲ್ಲಿ ಪ್ರಸಿದ್ಧವಾದ ಶರೀರವನ್ನು, **ಗುಣಪುಂಷಿ** = ಬಲಜ್ಞಾನಾದಿ ಗುಣಗಳಿಂದ ತುಂಬಿರುವ, **ಇತಿ** = ಈ ಪ್ರಕಾರದಿಂದಲೂ, **ಅಹಮ್ ಅಹಮ್ ಭಿದೇ (ಭಜಾಮಿ)** = ಅಹಂಕಾರವನ್ನು ನಾಶ ಮಾಡುವ ನಿನ್ನನ್ನು ನಾನು ಸೇವಿಸುತ್ತೇನೆ.

***ತಾತ್ಪರ್ಯಾರ್ಥ :***

ಎಲೈ ಹರಿಯಿಂದ ಹುಟ್ಟಿದ ಅಜನೆನಿಸಿದ ಶಿವನೇ, ಪೃಥಿವೀ – ನೀರು – ಅಗ್ನಿ – ವಾಯು – ಆಕಾಶ – ಸೂರ್ಯ – ಚಂದ್ರ – ಅಗ್ನಿಹೋತ್ರಿ, ಇವರುಗಳಲ್ಲಿ ಅಂತರ್ಯಾಮಿಯಾಗಿರುವವನು. ಅಹಂಕಾರತತ್ವವೇ ದೇಹವಾಗುಳ್ಳವನು. ನೀನು ಪೃಥಿವೀ ಮೊದಲಾದ ಎಂಟು ರೂಪಗಳುಳ್ಳ 'ನಾನು' ಎಂಬ ಅಹಂಕಾರವನ್ನು ನಾಶ ಮಾಡು. ನಿನ್ನನ್ನು ಭಜಿಸುವೆ. ಅನಂತರ ಪ್ರಶಾಂತವಾದ, ಅತ್ಯಂತ ಸುಂದರವಾದ ನೀನು ನನ್ನ ಅಹಂಕಾರವನ್ನು ನಾಶಗೊಳಿಸು. ನಿನ್ನನ್ನು ಭಜಿಸುವೆ. ವೇದಪುರಾಣಗಳಲ್ಲಿ ಪ್ರಸಿದ್ಧವಾದ ಬಲಜ್ಞಾನಾದಿಗಳಿಂದ ತುಂಬಿರುವ ನೀನು ನನ್ನ ಅಹಂಕಾರವನ್ನು ಖಂಡಿಸು. ನಾನು ನಿನ್ನನ್ನು ಸೇವಿಸುವೆನು.

**ವಿಮುಕ್ತಿ ಪರಮಾಧ್ವನಾಂ ತವ ಷಡಧ್ವನಾಮಾಸ್ಪದಂ**
**ಪದ ನಗಮವೇದಿನೋ ಜಗತಿ ವಾಮದೇವಾದಯಃ ।**
**ಕಥಂಚಿದುಪಶಿಕ್ಷಿತಾ ಭಗವತೈವ ಸಂವಿದ್ರತೇ**
**ವಯಂ ತು ವಿರಲಾಂತರಾಃ ಕಥಮುಮೇಶ ತನ್ಮನ್ಮಹೇ ॥ 5 ॥**

**ವಿಮುಕ್ತಿ** = ಬಂಧನ ಮಾಡುವುದು ಮತ್ತು ಮೋಕ್ಷದಲ್ಲಿ ಬಿಡುಗಡೆಗೊಳಿಸುವುದು, **ಪರಮ ಅಧ್ವನಾಮ್** = ಶ್ರೇಷ್ಠವಾದ ಮಾರ್ಗದಲ್ಲಿರುವ, **ಷಡ್ ಅಧ್ವನಾಮ್** = ಸಾಂಖ್ಯಯೋಗ ಮೊದಲಾದ ಆರು ದರ್ಶನದ ಮಾರ್ಗದಲ್ಲಿರುವವರಿಂದ, **ಆಸ್ಪದಂ** = ಪ್ರತಿಪಾದ್ಯವಾದ, **ತವ ಪದಂ** = ನಿನ್ನ ಸ್ವರೂಪವನ್ನು, **ನಿಗಮವೇದಿನಃ** = ವೇದವನ್ನು ತಿಳಿದಿರುವ, **ವಾಮದೇವಾದಯಃ** = ವಾಮದೇವನೆ ಮೊದಲಾದ ಮುನಿಗಳು, **ಹೇ ಸಂವಿದ್ರತೇ** = ಎಲೈ ಭಗವತ್ ಜ್ಞಾನದಲ್ಲಿ ಆಸಕ್ತನಾದವನೇ, ರುದ್ರನೇ, **ಭಗವತಾ** = ಷಡ್ಗುಣ ಸಂಪನ್ನನಾದ ನಿನ್ನಿಂದಲೇ, **ಸಂಶಿಕ್ಷಿತಾ** = ಸಜ್ಜನರಿಗೆ ಉಪದೇಶವು ಆಗಿರುವಾಗ, **ಜಗತಿ** = ಈ ಜಗತ್ತಿನಲ್ಲಿ, **ಕಥಂಚಿತ್** = ಬೇರೆ ಯಾರಿಂದಲೂ, (ಜಾನಂತಿ = ತಿಳಿಯಲಾರೆವು), **ವಿರಲಾಂತರಾಃ** = ಚಪಲದಿಂದ ಕೂಡಿದ ಮನಸ್ಸುಳ್ಳವರು, **ವಯಂ ತು** = ನಾವಾದರೂ, **ಉಮೇಶ** = ಪಾರ್ವತಿ ಪತಿಯೇ ಆ ಭಗವಂತನ ಸ್ವರೂಪವನ್ನು, **ಕಥಂ** = ಹೇಗೆ, **ಮನ್ಮಹೇ** = ತಿಳಿಯುತ್ತೇವೆ.

*ತಾತ್ಪರ್ಯಾರ್ಥ :*

ಬಂಧನ ಮತ್ತು ಮೋಕ್ಷ, ಈ ಎರಡು ಮಾರ್ಗದಲ್ಲಿರುವವರಿಂದ ನೀನು ಪ್ರತಿಪಾದ್ಯನು. ನಿನ್ನ ಸ್ವರೂಪ ಸಾಂಖ್ಯ-ಯೋಗ ಮೊದಲಾದ ಆರು ವಿಧದ ದಾರ್ಶನಿಕರಿಗೆ ವಿಷಯವಾಗಿದೆ. ವೇದಬಲ್ಲ ವಾಮದೇವ ಮೊದಲಾದ ಮುನಿಗಳು, ನಿನ್ನಿಂದ ಉಪದೇಶ ಪಡೆದಿರುವರು. ಸಜ್ಜನರಿಗೆ ಜಗತ್ತಿನಲ್ಲಿ ಉಪದೇಶ ನಿನ್ನಿಂದ ಆಗಿದೆ. ನಾವಾದರೋ ಚಪಲ ಚಿತ್ತರು. ಹೀಗಿರುವಾಗ ಪಾರ್ವತೀಪತಿಯೇ ನಿನ್ನ ಸ್ವರೂಪವನ್ನು ಹೇಗೆ ನಾವು ತಿಳಿಯುವೆವು.

**ಕಠೋರಿತಕುಠಾರಯ ಲಲಿತಶೂಲಯಾ ಬಾಹಯಾ**
**ರಣಡ್ಡಮರಯಾ ಸ್ಫುರಡ್ಢರಿಣಯಾ ಸಖಟ್ವಾಂಗಯಾ ।**
**ಚಲಾಭಿರಚಲಾಭಿರಪ್ಯಗಣಿತಾಭಿರುನ್ನೃತ್ಯತಃ**
**ಚತುರ್ದಶ ಜಗಂತಿ ತೇ ಜಯ ಜಯೇತ್ಯಯುರ್ವಿಸ್ಮಯಮ್ ॥ 6 ॥**

*ಪದಾರ್ಥ :*

**ಹೇ ರುದ್ರ** = ಎಲೈ ರುದ್ರನೇ, **ಚತುರ್ದಶ** = ಹದಿನಾಲ್ಕು ಲೋಕಗಳು ನಿನ್ನನ್ನು, **ಜಗಂತಿ** = ಹೊಗಳುತ್ತವೆ, **ಕಠೋರಿತ ಕುಠಾರಯಾ** = ಕ್ರೂರವಾದ ಕೊಡಲಿಯುಳ್ಳವನು, **ಬಾಹಯಾ** = ಬಾಹುವಿನಿಂದ, **ಲಲಿತ ಶೂಲಯಾ** = ಮನೋಹರವಾದ ಶೂಲದಿಂದ ಕೂಡಿರುವವನು, **ರಣತ್ ಡಮರಯಾ** = ರಣ್ ಎಂಬ ಶಬ್ದವನ್ನು ಮಾಡುವ ಡಮರುವನ್ನು ಕೂಡಿರುವ, [**ಬಾಹಯಾ** = ತೋಳುಳ್ಳವನು], **ಸ್ಫುರತ್ ಹರಿಣಯಾ** = ಹೊಳೆಯುವ ಮೃಗದಿಂದ ಕೂಡಿರುವ, [**ಬಾಹಯಾ** = ತೋಳುಳ್ಳವನು], **ಸಖಟ್ವಾಂಗಯಾ** = ಖಟ್ವಾಂಗವೆಂಬ ಆಯುಧದಿಂದ ಕೂಡಿರುವ, [**ಬಾಹಯಾ** = ತೋಳುಳ್ಳವನು], **ಸಖಟ್ವಾಂಗಯಾ** = ಖಟ್ವಾಂಗವೆಂಬ ಆಯುಧದಿಂದ ಕೂಡಿರುವ [**ಬಾಹಯಾ** = ತೋಳುಳ್ಳವನು], **ಚಲಾಭಿಃ** = ನಾಟ್ಯವಾಡುವುದನ್ನು ತೋರಿಸಲು, **ಅಚಲಾಭಿಃ** = ಅಚಲವಾಗದವರಿಂದ, **ಅಗಣಿತಾಭಿಃ** = ಎಣಿಸಲಸಾಧ್ಯವಾದ ಗುಣಗಳುಳ್ಳವನು, **ಅನ್ನೃತ್ಯತಃ** = ಉತ್ಕೃಷ್ಟವಾದ ನೃತ್ಯವನ್ನು ಮಾಡುತ್ತಿರುವ, **ತೇ** = ನಿನ್ನ [ರೂಪವನ್ನು ನೋಡಿ], **ಜಯ ಜಯ ಇತಿ** = ಜಯ ಜಯವೆಂದು, **ವಿಸ್ಮಯಮ್** = ಆಶ್ಚರ್ಯವನ್ನು, **ಯಯು** = ಹೊಗಳಿದರು (ಪ್ರಕಟ ಪಡಿಸಿದರು).

*ತಾತ್ಪರ್ಯಾರ್ಥ :*

ಎಲೈ ರುದ್ರನೇ, ಹದಿನಾಲ್ಕು ಲೋಕಗಳು ನಿನ್ನನ್ನು ಹೊಗಳುತ್ತವೆ. ಕ್ರೂರವಾದ ಕೊಡಲಿಯುಳ್ಳವನೇ. ಮನೋಹರವಾದ ತ್ರಿಶೂಲ ಧರಿಸಿರುವುದು ನಿನ್ನ ತೋಳುಗಳು. ರಣ್ ಎಂಬ ಶಬ್ದ ಮಾಡುವ ಡಮರು ಧರಿಸಿರುವೆ. ಹೊಳೆಯುವ ಮೃಗ ಚರ್ಮಾಂಬರಧಾರಿ ಖಟ್ವಾಂಗವೆಂಬ ಆಯುಧ ಧರಿಸಿರಿವೆ. ಎಣಿಸಲಸಾಧ್ಯವಾದ ಗುಣಗಳುಳ್ಳವ. ಉತ್ಕೃಷ್ಟವಾದ ತಾಂಡವ ನೃತ್ಯ ಮಾಡುವ ಈ ನಿನ್ನ ರೂಪಕ್ಕೆ ಜಯ ಜಯ.

**ಪುರತ್ರಿಪುರರಂಧನಂ ವಿವಿಧದೈತ್ಯವಿಧ್ವಂಸನಂ**
**ಪರಾಕ್ರಮಪರಂಪರಾ ಅಪಿ ಪರಾ ನ ತೇ ವಿಸ್ಮಯಃ ।**
**ಅಮರ್ಷಬಲಹರ್ಷಿತಕ್ಷುಭಿತವೃತ್ತನೇತ್ರತ್ರಯೋ**
**ಜ್ವಲಜ್ವಲನ ಹೇಲಯ ಶಲಭಿತಂ ಹಿ ಲೋಕತ್ರಯಮ್ ॥ 7 ॥**

*ಪದಾರ್ಥ :*

**ಹಿ** = ಯಾವ ಕಾರಣದಿಂದ, **ಲೋಕತ್ರಯಮ್** = ಮೂರು ಲೋಕಗಳನ್ನು, **ಅಮರ್ಷ** = ಕ್ರೋಧವು, **ಬಲ** = ಬಲವು, **ಹರ್ಷಿತ** = ಸಂತೋಷವು, [ಇವುಗಳಿಂದ],

**ಕ್ಷುಭಿತ** = ಸಿಟ್ಟುಗೊಂಡ, **ವೃತ್ತ ನೇತ್ರ** = ಗುಂಡಾದ ಮೂರು ಕಣ್ಣುಗಳುಳ್ಳ, **ಉಜ್ಜ್ವಲಾ** = ಪ್ರಜ್ವಲಿಸುವ, **ಜ್ವಲನ** = ಅಗ್ನಿಯು, **ಹೇಲಾ** = ಲೀಲೆಯು (ಅದರಿಂದ ಕೂಡಿರುವ), **ಶಲಭಿತಮ್** = ಮಿಣುಕು ಹುಳದಂತಾಚರಿಸುವುದೋ [ಹೇಗೆ ಮಿಣುಕು ಹುಳವು ಅಗ್ನಿಯಲ್ಲಿ ಭಸ್ಮವಾಗುವುದೋ ಹಾಗೆಯೇ ಭಸ್ಮ ಭೂತವಾದ ಪ್ರಳಯ ಕಾಲದಂತಿರುವ], **ಪುರ ತ್ರಿಪುರ ರಂಧನಂ** = ತ್ರಿಪುರ ಎಂಬ ರಾಕ್ಷಸರ ಪಟ್ಟಣಗಳನ್ನು ಭಸ್ಮ ಮಾಡಿದ, **ವಿವಿಧ** = ನಾನಾ ವಿಧವಾದ, **ದೈತ್ಯ ವಿಧ್ವಂಸನಮ್** = ದೈತ್ಯರ ಸಂಹಾರವು, **ಪರಾ** = ಶ್ರೇಷ್ಠವಾದ, **ಪರಾಕ್ರಮಪರಂಪರಾ ಅಪಿ** = ಪರಾಕ್ರಮದ ಪರಂಪರೆಯು, [**ಹೇ ಶಿವ** = ಎಲೈ ಶಿವನೇ], **ತೇ** = ನಿನ್ನ (ನಿನಗೆ), **ವಿಸ್ಮಯ ನ** = ಅಶ್ಚರ್ಯವೇನಲ್ಲ. [ಇದಕ್ಕಿಂತಲೂ ಹೆಚ್ಚು ಮಹಾತ್ಮೆವುಳ್ಳವನು ಎಂದರ್ಥ.]

*ತಾತ್ಪರ್ಯಾರ್ಥ :*

ನಿನ್ನ ಮಹಿಮೆ ಅಪಾರವಾದುದು. ಹೇಗೆ ಮಿಣುಕು ಹುಳುವು ಅಗ್ನಿಯಲ್ಲಿ ಸುಡುವುದೋ ಹಾಗೆ ಪ್ರಳಯ ಕಾಲದಲ್ಲಿ ಈ ಜಗತ್ತು ಭಸ್ಮವಾಗುತ್ತದೆ. ತ್ರಿಪುರಾಸುರರ ಪಟ್ಟಣವನ್ನು ನೀನು ಸುಟ್ಟೆ. ನಾನಾ ವಿಧವಾದ ದೈತ್ಯರ ಸಂಹಾರವು ಶ್ರೇಷ್ಠವಾದ, ಪರಾಕ್ರಮದ ಪರಂಪರೆಯನ್ನು ಎಲೈ ಶಿವನೇ, ನೀನು ಪಡೆದಿರುವೆ. ನಿನ್ನ ಮಹಿಮೆ ಅತ್ಯಾಶ್ಚರ್ಯವೇನಲ್ಲ. ಇನ್ನೂ ಮಹಾತ್ಮ್ಯ ಹೆಚ್ಚೇ ಇದೆ.

**ಸಹಸ್ರನಯನೋ ಗುಹಃ ಸಹ ಸಹಸ್ರರಶ್ಮಿರ್ವಿಧು**
**ರ್ಬೃಹಸ್ಪತಿರುತಾಪ್ಪತಿಃ ಸಸುರಸಿದ್ಧವಿದ್ಯಾಧರಾಃ ।**
**ಭವತ್ಪದಪರಾಯಣಾಃ ಶ್ರಿಯಮಿಮಾಮಗುಃ ಪ್ರಾರ್ಥಿನಾಂ**
**ಭವಾನ್ ಸುರತರುರ್ಧೃಶಂ ದಿಶ ಶಿವಾಂ ಶಿವಾವಲ್ಲಭ ॥ 8 ॥**

*ಪದಾರ್ಥ :*

**ಶಿವಾವಲ್ಲಭ** = ಪಾರ್ವತಿಗೆ ಪ್ರಿಯನಾದವನೇ, **ಭವತ್ಪದಪರಾಯಣಾಃ** = ನಿನ್ನ ಪಾದಗಳೆರಡರಲ್ಲಿ ಮುಖ್ಯಾಶ್ರಯವಾಗುಳ್ಳಂತವರು, **ಸಸುರಸಿದ್ಧವಿದ್ಯಾಧರಾಃ** = ಸುರರಿಂದಲೂ, ಸಿದ್ಧರಿಂದಲೂ, ವಿದ್ಯಾಧರರಿಂದಲೂ ಕೂಡಿರುವ, **ಸಹಸ್ರನಯನಃ** = ಸಾವಿರ ಕಣ್ಣುಗಳುಳ್ಳ ಇಂದ್ರನು, **ಗುಹಃ** = ಷಣ್ಮುಖನು, **ಸಹ ಸಹಸ್ರರಶ್ಮಿಃ** = ಸಾವಿರ ಕಿರಣಗಳುಳ್ಳ ಸೂರ್ಯನು, **ವಿಧುಃ** = ಚಂದ್ರನು, **ಬೃಹಸ್ಪತಿಃ** = ದೇವಗುರು ಬೃಹಸ್ಪತ್ಯಾಚಾರ್ಯನು, **ಉತ** = ಅನಂತರ, **ಅಪ್ಪತಿಃ** = ನೀರಿನೊಡೆಯನಾದ ವರುಣನು, (ಇವರೇ ಮೊದಲಾದವರು), **ಇಮಾಂ** = ತಮ್ಮ ಪದದ ಪ್ರಾಪ್ತಿಯೆಂಬ ಲಕ್ಷಣವನ್ನು, **ಶ್ರಿಯಂ** = ಐಶ್ವರ್ಯವನ್ನು, **ಅಗುಃ** = ಹೊಂದಿರುತ್ತಾರೆ, (ಆದ್ದರಿಂದ) **ಭವಾನ್** =

ನೀನು, **ಪ್ರಾರ್ಥಿನಾಂ** = ತಮ್ಮ ಅಭೀಷ್ಟದ ಪ್ರಾರ್ಥನೆಯನ್ನು ಮಾಡುವವರಿಗೆ, **ಸುರತರುಃ** = ಕಲ್ಪವೃಕ್ಷದಂತೆ, [ಸರ್ವಾಭೀಷ್ಟವನ್ನು ಕೊಡುವಿ], [ಆದ್ದರಿಂದ, ನಿನ್ನ ಭಕ್ತನಾದ ನನಗೆ], **ಶಿವಮ್** = ಮಂಗಳವಾದ, **ದೃಶಂ** = ಜ್ಞಾನವನ್ನು, **ದಿಶ** = ಕೊಡು.

*ತಾತ್ಪರ್ಯಾರ್ಥ :*

ಪಾರ್ವತಿಗೆ ಪ್ರಿಯನಾದವನೇ, ಸುರರು, ಸಿದ್ಧರು, ವಿದ್ಯಾಧರರು, ಸಾವಿರಕಣ್ಣುಳ್ಳ ಇಂದ್ರ, ಷಣ್ಮುಖ, ಸಾವಿರ ಕಿರಣದ ಸೂರ್ಯ, ಚಂದ್ರ, ದೇವತೆಗಳ ಗುರು ಬೃಹಸ್ಪತಿ, ನೀರಿಗಭಿಮಾನಿಯಾದ ವರುಣ ಇವರೇ ಮೊದಲಾದವರು ನಿನ್ನ ಪಾದಗಳನ್ನಾಶ್ರಯಿಸಿದ್ದಾರೆ. ಸಂಪತ್ತನ್ನು ಪಡೆದಿದ್ದಾರೆ. ನೀನು ಪ್ರಾರ್ಥಿಸುವವರ ಅಭೀಷ್ಟಗಳನ್ನು ಕಲ್ಪವೃಕ್ಷದಂತೆ ಕೊಡುವೆ. ನಿನ್ನ ಭಕ್ತನಾದ ನನಗೆ ಮಂಗಳಕರವಾದ ಜ್ಞಾನವನ್ನು ಕೊಡು.

**ತವ ಪ್ರಿಯತಮಾದತಿಪ್ರಿಯತಮಂ ಸದೈವಾಂತರಂ**
**ಪಯಸ್ಯುಪಹಿತಂ ಘೃತಂ ಸ್ವಯಮಿವ ಶ್ರಿಯೋ ವಲ್ಲಭಮ್ ।**
**ವಿಭಿದ್ಯ ಲಘುಬುದ್ಧಯಃ ಸ್ವಪರಪಕ್ಷಲಕ್ಷಾಯಿತಂ**
**ಪಠಂತಿ ಹಿ ಲುಠಂತಿ ತೇ ಶಠಹೃದಃ ಶುಚಾ ಶುಂಠಿತಾಃ ॥ 9 ॥**

*ಪದಾರ್ಥ :*

**ಲಘುಬುದ್ಧಯಃ** = ಸೂಕ್ಷ್ಮವಾದ ಅರ್ಥವನ್ನು ಗ್ರಹಿಸುವ ಬುದ್ಧಿಗಳುಳ್ಳ, **ವಾಮದೇವಾಯಃ** = ವಾಮದೇವ ಮೊದಲಾದ ಋಷಿಗಳು, [**ಹೇ ರುದ್ರ** = ಎಲೈ ರುದ್ರನೇ], **ತವ** = ನಿನಗೆ, **ಪ್ರಿಯತಮಾತ್** = ಅತಿ ಪ್ರಿಯರಾದುದರಿಂದ, **ಅತಿಪ್ರಿಯತಮಂ** = ಅತಿಶಯವಾದ ಪ್ರಿಯವುಳ್ಳ(ಪರಾಗಿ). **ಸದೈವ** = ಸದಾ ಕಾಲದಲ್ಲೂ, **ಅಂತರಮ್** = ಹೃದಯಾಕಾಶದಲ್ಲಿ (ಸಂತೋಷ ಪಡುತ್ತಾರೆ), **ಸ್ವಪಕ್ಷಃ** = ತಮ್ಮ ಸಿದ್ಧಾಂತ, **ಪರಪಕ್ಷಃ** =ಪರರ ಸಿದ್ಧಾಂತ [ಇವೆರಡನ್ನೂ], **ಲಕ್ಷಾಯಿತಂ** = ವಿಷಯೀಕರಿಸಿ, **ಶ್ರಿಯಃ** = ಲಕ್ಷ್ಮಿಗೆ, **ವಲ್ಲಭಮ್** = ಪ್ರಿಯನಾದ, [**ಹರಿಮ್** =ಹರಿಯನ್ನು], **ಪಯಸಿ** = ಹಾಲಿನಲ್ಲಿ, **ಉಪಹಿತಮ್** = ಗೂಢವಾಗಿರುವ, **ಘೃತಮಿವ** = ತುಪ್ಪದಂತೆ, **ವಿಭಿದ್ಯ** = ವೇದಶಾಸ್ತ್ರದ ವಿಚಾರದಿಂದ, ರುದ್ರನಿಗಿಂತ ಹರಿ ಬೇರೆ ಎಂಬುದನ್ನು ಪ್ರತಿಪಾದಿಸಿ, **ಸ್ವಯಂ ಪಠಂತಿಹಿ** = ತಾವು ಓದುತ್ತಾರೆ ಮತ್ತು ಮತ್ತೊಬ್ಬರಿಗೆ ಉಪದೇಶಿಸುತ್ತಾರೆ, **ಶುಚಾ** = ಮಿಥ್ಯಾಜ್ಞಾನ-ದಿಂದುಂಟಾದ ದುಃಖದಿಂದ, **ಶುಂಠಿತಾಃ** = ಮೂರ್ಛೆಗೊಂಡ, **ಶಠಹೃದಃ** = ಗೂಢದ್ವೇಷದಿಂದುಕ್ತವಾದ ಅಂತಕರಣವುಳ್ಳವರನ್ನು, **ಲುಠಂತಿ** = ನರಕದಲ್ಲಿ ಅತ್ತ ಇತ್ತ ಒಯ್ದಾಡುತ್ತಾರೆ.

*ತಾತ್ಪರ್ಯಾರ್ಥ :*

ಸೂಕ್ಷ್ಮವಾದ ಅರ್ಥವನ್ನು ಗ್ರಹಿಸುವ ಬುದ್ಧಿಯುಳ್ಳ ವಾಮದೇವ ಮೊದಲಾದ ಋಷಿಗಳು ನಿನಗೆ ಅತಿಪ್ರಿಯರು. ಸದಾ ಹೃದಯಾಕಾಶದಲ್ಲಿ ಸಂತೋಷಪಡುತ್ತಾರೆ. ತಮ್ಮ ಸಿದ್ಧಾಂತ, ಪರರ ಸಿದ್ಧಾಂತಗಳಿಗೆ ವಿಷಯೀ ಭೂತನಾದ, ಲಕ್ಷ್ಮೀದೇವಿಗೆ ಪ್ರಿಯನಾದ ಹರಿಯನ್ನು ಅವರು ಕಾಣುತ್ತಾರೆ. ಹೇಗೆ ಹಾಲಿನಲ್ಲಿ ಅಡಗಿರುವ ತುಪ್ಪದಂತೆ, ವೇದ ಶಾಸ್ತ್ರಮಥನದಿಂದ, ರುದ್ರನಿಗಿಂತ ಹರಿ ಬೇರೆ, ಹರಿಯು ಉತ್ತಮನೆಂದು ಆ ಋಷಿಗಳು ಪ್ರತಿಪಾದಿಸುತ್ತಾರೆ. ಇತರರಿಗೂ ಉಪದೇಶಿಸುತ್ತಾರೆ. ಮಿಥ್ಯಾಜ್ಞಾನದಿಂದುಂಟಾದ ದುಃಖದಿಂದ, ಮೂರ್ಖ-ಗೊಂಡ, ಗೂಡ ದ್ವೇಷದಿಂದ ಕೂಡಿರುವ ಅಂತಃಕರಣದವರು ನರಕದಲ್ಲಿ ಬೀಳುತ್ತಾರೆ.

**ನಿವಾಸನಿಲಯಶ್ಚಿತಾ ತವ ಶಿರಸ್ತತಿರ್ಮಾಲಿಕಾ**
**ಕಪಾಲಮಪಿ ತೇ ಕರೇ ತ್ವಮಶಿವೋಽಸ್ಯನಂತರ್ಧಿಯಾಮ್ ।**
**ತಥಾಽಪಿ ಭವತಃ ಪದಂ ಶಿವಶಿವೇತ್ಯದೋ ಜಲ್ಪತಾ**
**ಮಕಿಂಚನ ನ ಕಿಂಚನ ವೃಜಿನಮಸ್ತ್ಯಭಸ್ಮೀಭವತ್ ॥ 10 ॥**

*ಪದಾರ್ಥ :*

**ಹೇ ಶಿವ** = ಎಲೈ ಈಶ್ವರನೇ, **ಅಪಿ** = ವಸ್ತುತಃ, **ತವ** = ನಿನ್ನ (ನೀನು), **ನಿವಾಸ** = ಅವಸ್ಥಾನದ (ಇರಲು ಬೇಕಾದ ಸ್ಥಳವಾದ), **ನಿಲಯಃ** = ಮನೆಯು, **ಚಿತಾ** = ಸ್ಮಶಾನವು, **ಶಿರಸ್ತತಿಃ** = ತಲೆಯ ಪಂಕ್ತಿಯು, **ಮಾಲಿಕಾ** = ಕಂಠ ಮಾಲೆಯು, **ತೇ ಕರೇ** = ನಿನ್ನ ಕೈಯಲ್ಲಿ, **ಕಪಾಲಮ್** = ಕಪಾಲವು (ಇದೆ), **ಅಂತರ್ಧಿಯಾಮ್** = ಅಧ್ಯಾತ್ಮ ಜ್ಞಾನ ರಹಿತನಾದವರಿಗೆ, **ಅಶಿವೋಽಸಿ** = ಅಮಂಗಳನಾಗಿದ್ದೀ, **ತಥಾಽಪಿ** = ಆದರೂ, **ಹೇ ಅಕಿಂಚನ** = ಎಲೈ ವಿರಕ್ತನೇ, **ಭವತಃ** = ನಿನ್ನ, **ಶಿವಶಿವೇತಿ** = ಶಿವಶಿವನೆಂಬ, **ಅದಃ** = ಆ ಶ್ರುತಿ ಪ್ರಸಿದ್ಧವಾದ, **ಪದಮ್** = ಹೆಸರನ್ನು, **ಜಲ್ಪತಾಮ್** = ಜಪಿಸುವವರಿಗೆ, **ಕಿಂಚನ** = ಸ್ವಲ್ಪವೂ, **ವೃಜಿನಮ್** = ಪಾಪವು, **ಅಭಸ್ಮೀಭವತ್** = ಭಸ್ಮವಾಗುತ್ತದೆ (ಸುಟ್ಟು ಹೋಗುತ್ತದೆ).

*ತಾತ್ಪರ್ಯಾರ್ಥ :*

ಎಲೈ ಶಿವನೇ, ನಿನ್ನ ವಾಸ ಸ್ಮಶಾನ. ಕೊರಳಲ್ಲಿ ತಲೆಬುರುಡೆಗಳ ಮಾಲೆ ಇದೆ. ಕೈಯಲ್ಲಿ ಕಪಾಲವಿದೆ. ನೀನು ಅಧ್ಯಾತ್ಮ ಜ್ಞಾನವಿಲ್ಲದವರಿಗೆ ಅಮಂಗಳವನ್ನೀಯುವೆ. ಆದರೂ, ವಿರಕ್ತನೇ, ನಿನ್ನನ್ನು ಶಿವ ಶಿವ ಎಂಬ ಹೆಸರಿನಿಂದ ಯಾರು ಜಪಿಸುವರೋ ಅವರಿಗೆ ಪಾಪವೆಲ್ಲ ಸುಟ್ಟು ಹೋಗುತ್ತದೆ.

**ತ್ವಮೇವ ಕಿಲ ಕಾಮಧಕ್ ಸಕಲಕಾಮಮಾಪೂರಯನ್**
**ಸದಾ ತ್ರಿನಯನೋ ಭವಾನ್ ವಹಸಿ ಚಾತ್ರಿನೇತ್ರೋದ್ಭವಮ್ ।**
**ವಿಷಂ ವಿಷಧರಾನ್ ದಧಾತ್ ಪಿಬಸಿ ತೇನ ಚಾನಂದವಾನ್**
**ವಿರುದ್ಧ ಚರಿತೋಚಿತಾ ಜಗದಧೀಶ ತೇ ಭಿಕ್ಷುತಾ ॥ 11 ॥**

*ಪದಾರ್ಥ :*

**ಹೇ ವಿರುದ್ಧಚರಿತ** = ಎಲ್ಲೈ ವಿರುದ್ಧವಾದ ಕರ್ಮವುಳ್ಳವನೇ, **ಜಗದಧೀಶ** = ಜಗತ್ತಿನೊಡೆಯನೇ, **ತ್ವಂ** = ನೀನು, **ಸಕಲಕಾಮಮ್** = ಎಲ್ಲಾ ಭಕ್ತ ಜನರ ಇಷ್ಟಾರ್ಥಗಳನ್ನು, **ಆಪೂರಯನ್** = ತುಂಬಿಸುವೆ (ಕೊಡುವೆ), **ತ್ವಮೇವ** = ನೀನೇ, **ಕಾಮಧಕ್** = ಮನ್ಮಥನನ್ನು ಸುಟ್ಟಿರುವೆ, **ಹಿ** = ಇದು ಪ್ರಸಿದ್ಧವಷ್ಟೇ, **ಭವಾನ್** = ನೀನು, **ತ್ರಿನಯನಃ ಸದಾ** = ಯಾವಾಗಲೂ ಮೂರು ಕಣ್ಣುಗಳುಳ್ಳವನು, **ತಥಾಪಿ** = ಆದರೂ, **ಅತ್ರಿನೇತ್ರೋದ್ಭವಮ್** = ಅತ್ರಿ ಮುನಿಯ ಕಣ್ಣುಗಳೆರಡರಿಂದ ಉದ್ಭವಿಸಿದ ಚಂದ್ರನನ್ನು, **ವಹಸಿ** = ಧರಿಸಿರುವಿ, **ವಿಷಧರಾಃ** = ಸರ್ಪಗಳನ್ನು, **ದಧತ್** = ಧರಿಸಿರುವಿ, **ತ್ವಂ** = ನೀನು, **ವಿಷಮ್** = ವಿಷವನ್ನು, **ಪಿಬಸಿ** = ಪಾನ ಮಾಡುತ್ತೀಯ, **ತೇನ** = ಆ ವಿಷ ಪಾನದಿಂದ, **ಆನಂದವಾನ್ ಅಸಿ** = ಆನಂದವುಳ್ಳವನಾಗಿದ್ದೀ, **ಜಗದಧೀಶ ರುದ್ರ** = ಜಗದೊಡೆಯ ರುದ್ರನೇ, **ತೇ ಭಿಕ್ಷುತಾ** = ನಿನ್ನ ಭಿಕ್ಷಾಟನೆಯು (ವಿರುದ್ಧ ಚರಿತೆಯುಳ್ಳದ್ದಾದ್ದರಿಂದ) ಉಚಿತವಾಗಿಯೇ ಇದೆ.

*ತಾತ್ಪರ್ಯಾರ್ಥ :*

ಎಲ್ಲೈ ವಿರುದ್ಧವಾದ ಕರ್ಮವುಳ್ಳವನೇ, ಜಗತ್ತಿನೊಡೆಯನೇ, ನೀನು ಭಕ್ತರ ಇಚ್ಛೆಗಳನ್ನು ಕೊಡುವೆ. ಮನ್ಮಥನನ್ನು ಸುಟ್ಟಿರುವೆ. ಇದು ಪ್ರಸಿದ್ಧವಾಗಿದೆ. ನೀನು ಮೂರು ಕಣ್ಣುಗಳುಳ್ಳವ. ಅತ್ರಿ ಮುನಿಯ ಕಣ್ಣುಗಳೆರಡರಿಂದ ಉದ್ ಭವಿಸಿದ ಚಂದ್ರನನ್ನು ಧರಿಸಿರುವಿ. ಹಾವನ್ನು ಧರಿಸಿರುವಿ. ವಿಷವನ್ನು ಕುಡಿದಿರುವಿ. ವಿಷ ಕುಡಿದು ಆನಂದವಾಗಿರುವಿ. ಜಗದೊಡೆಯನೇ ನಿನ್ನೀ ಸಂಪತ್ತೆಲ್ಲ ಇದ್ದರೂ ಅದಿಲ್ಲದಂತೆ ವಿರುದ್ಧ ಕರ್ಮವುಳ್ಳ ಭಿಕ್ಷಾಟನೆಯು ನೀನಗುಚಿತವೇ ಆಗಿದೆ.

**ನಮಃ ಶಿವ ಶಿವಾಶಿವಾಶಿವ ಶಿವಾರ್ಧ ಕೃಂತಾಶಿವಂ**
**ನಮೋ ಹರಹರಹರಾಹರಹರಾಂತರೀಂ ಮೇ ದೃಶಮ್ ।**
**ನಮೋ ಭವ ಭವಾಭವಪ್ರಭವ ಭೂತಯೇ ಸಂಪದಾಂ**
**ನಮೋ ಮೃಡ ನಮೋ ನಮೋ ನಮ ಉಮೇಶ ತುಭ್ಯಂ ನಮಃ ॥ 12 ॥**

*ಪದಾರ್ಥ :*

**ಹೇ ಶಿವ** = ಎಲೈ ಮಂಗಳವನ್ನು ನೀಡುವವನೇ, **ಹೇ ಅಶಿವಾಶಿವ** = ಎಲೈ ದೈತ್ಯರಿಗೆ ಅಮಂಗಳವನ್ನುಂಟು ಮಾಡುವವನೇ, **ಹೇ ಶಿವಾರ್ಧ** = ಎಲೈ ಉಮೆಯನ್ನರ್ಧ–ವಾಗುಳ್ಳವನೇ, **ತುಭ್ಯಂ ನಮಃ** = ನಿನಗೆ ನಮಸ್ಕಾರವು, ನೀನು, **ಮೇ** = ನನಗೆ, **ಅಶಿವಂ** = ಅಮಂಗಳವನ್ನು, **ಛೇದಯ** = ನಾಶಪಡಿಸು, **ಹೇ ಹರ** = ಎಲೈ ಹರನೇ, **ತುಭ್ಯಂ ನಮಃ** = ನಿನಗೆ ನಮಸ್ಕಾರವು, **ಆಂತರೀಂ** = ಒಳಗಿರುವ, **ದೃಶಮ್** = ಜ್ಞಾನ ದೃಷ್ಟಿಯನ್ನು, **ಅಹರಹಃ** = ಪ್ರತಿದಿನವೂ, **ಆಹರ** = ಕೊಡು, **ಹೇ ಭವ** = ಎಲೈ ರುದ್ರನೇ, **ತುಭ್ಯಂ ನಮಃ** = ನಿನಗೆ ನಮಸ್ಕಾರವು, **ಹೇ ಅಭವಃ ರುದ್ರ** = ಅ ಎಂಬೆಸರುಳ್ಳ ನಾರಾಯಣನಿಂದುತ್ಪನ್ನನಾದ ಬ್ರಹ್ಮನು, ಅವನಿಂದ ಹುಟ್ಟಿದವನೇ, ಎಲೈ ರುದ್ರನೇ, ನನ್ನ ಸಂಪತ್ ಮೊದಲಾದ ಐಶ್ವರ್ಯದ, **ಭೂತಯೇ** = ಉತ್ಪತ್ತಿಗೋಸ್ಕರ, **ಭವ** = ಆಗು, **ಹೇ ಮೃಡ** = ಎಲೈ ರುದ್ರನೇ, **ತುಭ್ಯಂ ನಮಃ** = ನಿನಗೆ ನಮಸ್ಕಾರವು, **ಹೇ ಉಮೇಶ** = ಎಲೈ ಪಾರ್ವತಿಗೊಡೆಯನೇ, **ತುಭ್ಯಂ ನಮೋ ನಮಃ** = ನಿನಗೆ ನನ್ನ ನಮಸ್ಕಾರವು ನಮಸ್ಕಾರವು.

*ತಾತ್ಪರ್ಯಾರ್ಥ :*

ಎಲೈ ಮಂಗಳವನೀವ ಶಿವನೇ! ಎಲ್ಲ ದೈತ್ಯರಿಗೆ ಅಮಂಗಲವನ್ನುಂಟು ಮಾಡುವಿ. ಎಲೈ ಅರ್ಧನಾರೀಶ್ವರನೇ ನಿನಗೆ ನನ್ನ ನಮನ. ಒಳಗಿರುವ ಜ್ಞಾನವನ್ನು ಪ್ರತಿದಿನ ನೀಡು. ಅ ಎನಿಸಿದ ನಾರಾಯಣನಿಂದುಟ್ಟಿದ ರುದ್ರನೇ, ನನ್ನ ಸಂಪತ್ತಿಗೋಸ್ಕರ ನೀನಾಗು. ಎಲೈ ಉಮೇಶನೇ ನನಗೆ ನನ್ನ ನಮನವು ನಮನವು.

**ಸತಾಂ ಶ್ರವಣಪದ್ಧತಿಂ ಸರತು ಸನ್ನತೋಕ್ತೇತ್ಯಸೌ**
**ಶಿವಸ್ಯ ಕರುಣಾಂಕುರಾತ್ ಪ್ರತಿಕೃತಾತ್ ಸದಾ ಸೋದಿತಾ ।**
**ಇತಿ ಪ್ರಥಿತಮಾನಸೋ ವ್ಯಧಿತ ನಾಮ ನಾರಾಯಣಃ**
**ಶಿವಸ್ತುತಿಮಿಮಾಂ ಶಿವಾಂ ಲಿಕುಚಸೂರಿಸೂನುಃ ಸುಧೀಃ ॥ 13 ॥**

*ಪದಾರ್ಥ :*

**ಲಿಕುಚಸೂರಿಃ** = ಲಿಕುಚ ವಂಶದ ವಿದ್ವಾಂಸನಾದ ತ್ರಿವಿಕ್ರಮ ಪಂಡಿತಾಚಾರ್ಯರ ಮಗನಾದವನು, **ಸುಧೀಃ** = ಶ್ರೇಷ್ಠವಾದ ಬುದ್ಧಿಯುಳ್ಳವನು, **ಪ್ರಥಿತಮ್** = ಶುದ್ಧವಾದ, **ಮಾನಸಮ್** = ಮನಸ್ಸುಳ್ಳವನಾಗಿ, **ನಾರಾಯಣಃ** = ನಾರಾಯಣ ಪಂಡಿತಾಚಾರ್ಯವೆಂಬೆಸರುಳ್ಳ, **ಶಿವಮ್** = ಮಂಗಳವಾದ, **ಇಮಾಂ ಶಿವಸ್ತುತಿಂ** = ಈ ಶಿವಸ್ತುತಿಯನ್ನು, **ವ್ಯಧಿತ** = ರಚಿಸಿದನು, **ಪ್ರತಿಕೃತಾ** = ಯಾವ ಕಾರಣದಿಂದ

ಶ್ರೇಷ್ಠವಾದ ಈ ಕೃತಿಯು, **ಶಿವಸ್ಯ ಕರುಣಾಂಕುರಾತ್** = ಶಿವನ ಕರುಣೆಯಿಂದಲೇ ಆಯಿತೋ, ಆದ್ದರಿಂದ, **ಉದಿತಾ** = ಉತ್ಪನ್ನವಾದ, **ಸನ್ನತೋಕ್ತಾ** = ಚೆನ್ನಾಗಿ ಸ್ತೋತ್ರ ಮಾಡಲ್ಪಟ್ಟ, **ಸಾ** = ಈ ಸ್ತುತಿಯು, **ಸತಾಂ** = ಸಜ್ಜನರ, **ಶ್ರವಣಪದ್ಧತಿಂ** = ಶ್ರೋತ್ರವೇನೇ ಮಾರ್ಗವಾಗಿವುಳ್ಳದ್ದಾಗಿ, **ಸದಾ** = ಯಾವಾಗಲೂ, **ಸರತು** = ಹೋಗಲಿ (ಸೇರಲಿ).

***ತಾತ್ಪರ್ಯಾರ್ಥ :***

ಲಿಕುಚ ವಂಶದ (ಪೆಜತ್ತಾಯ ವಂಶದ) ವಿದ್ವಾಂಸ, ತ್ರಿವಿಕ್ರಮ ಪಂಡಿತಾಚಾರ್ಯರ ಮಗನಾದ ಜ್ಞಾನಿಯಾದ ನಾರಾಯಣ ಪಂಡಿತಾಚಾರ್ಯನು ಮಂಗಳಕರವಾದ ಈ ಶಿವನ ಸ್ತುತಿಯನ್ನು ರಚಿಸಿದನು. ಈ ಶ್ರೇಷ್ಠವಾದ ಕೃತಿ ಶಿವನ ಕರುಣೆಯಿಂದ ಆಯಿತು. ಈ ಸ್ತುತಿ ಸಜ್ಜನರಿಗೆ ಮಂಗಳವನ್ನೀಯಲಿ.

**ಇಲ್ಲಿಗೆ ನಾರಾಯಣ ಪಂಡಿತಾಚಾರ್ಯ ವಿರಚಿತ ಶಿವಸ್ತುತಿಯ ಕನ್ನಡ ಭಾವಾನುವಾದ ಮುಗಿದುದು**

**॥ ಇತಿ ಶಿವಸ್ತುತಿಃ ಸಮಾಪ್ತಾ ॥**

# ತೀರ್ಥಪ್ರಬಂಧದಲ್ಲಿ ಬಂದ ಶಿವಸ್ತುತಿ

## ಎಲ್ಲೂರು ವಿಶ್ವನಾಥ

ರಕ್ಷೋಗಣಕ್ಷಪಣದಕ್ಷ ಮಹಾತ್ರಿಶೂಲಂ
ತ್ರ್ಯಕ್ಷಂ ವಲಕ್ಷತನು ಮಲ್ಲಸದಕ್ಷಮಾಲಮ್ ।
ರೂಕ್ಷಾಘ ಶಿಕ್ಷಣ ವಿಚಕ್ಷಣ ಶಕ್ತಿಯೂಥಂ
ದಕ್ಷಾಧ್ವ ರಕ್ಷ ಯದ ಮಾಶ್ರಯ ವಿಶ್ವನಾಥಮ್ ॥ 1 ॥

ಅಂಧಕಾಸುರನೇ ಮೊದಲಾದವರನ್ನು ಸಂಹರಿಸಲು ದೊಡ್ಡ ತ್ರಿಶೂಲವುಳ್ಳ, ಮೂರು ಕಣ್ಣುಗಳುಳ್ಳ, ಬಿಳಿಯ ಮೈಬಣ್ಣದ, ಶೋಭಿಸುತ್ತಿರುವ ಜಪ ಮಾಲೆಯುಳ್ಳ, ಪಾಪಗಳನ್ನು ದೂರ ಓಡಿಸುವ ದಕ್ಷಪ್ರಜಾಪತಿಯ ಯಜ್ಞವನ್ನು ನಾಶ ಮಾಡಿದ ವಿಶ್ವನಾಥನನ್ನು ಆಶ್ರಯಿಸು.

ಅಂಗಾನುಷಂಗತ ಭುಜಂಗ ಮತುಂಗ ಭೋಗಂ
ಗಂಗಾ ತರಂಗ ಕೃತ ಮಂಗಲ ಮೌಳಿ ಭಾಗಮ್ ।
ಸಂಗೀತ ಲೋಲಯತಿಪುಂಗವ ಗೀತ ಗಾಥಂ
ತಂ ಗೌರ್ಯಪಾಂಗರಸಮಾಶ್ರಮ ವಿಶ್ವನಾಥಮ್ ॥ 2 ॥

ಮೈಯಲ್ಲಿ ಹಾವುಗಳು, ಎತ್ತರದ ದೇಹ, ಗಂಗೆಯ ಅಲೆಗಳಿಂದ ಶೋಭಿತವಾದ ತಲೆಯು, ಸಂಗೀತದಲ್ಲಿ ರಸಿಕರಾದ ಯತಿಶ್ರೇಷ್ಠರಿಂದ ಹಾಡಲ್ಪಟ್ಟ ತ್ರಿಪುರಸಂಹಾರ ಮೊದಲಾದ ಕಥೆಯುಳ್ಳ, ಪಾರ್ವತಿಯ ಕಡೆಗಣ್ಣಿನೋಟಕ್ಕೆ ಸಾರರೂಪನಾದ ಆ ವಿಶ್ವನಾಥನನ್ನು ಸೇವಿಸು.

ಇಂದ್ರಾದಿ ದೇವ ಗಣ ವಂದಿತ ಪಾದಪದ್ಮಂ
ಚಂದ್ರಾರ್ಧ ಚೂಡಮರವಿಂದಲಾಯತಾಕ್ಷಮ್ ।
ಕಂದರ್ಪವೈರಿಣಮನಿಂದ್ಯ ಮಮಂದ ಬೋಧಂ
ತಂ ದೇವ ದೇವ ಮಿಮಮಾಶ್ರಯ ವಿಶ್ವನಾಥಮ್ ॥ 3 ॥

ಇಂದ್ರನೇ ಮೊದಲಾದ ದೇವತೆಗಳ ಸಮೂಹದಿಂದ ನಮಸ್ಕರಿಸಲ್ಪಟ್ಟ ಪಾದವುಳ್ಳ, ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿರುವ, ತಾವರೆಯ ದಳಗಳಂತೆ ವಿಶಾಲವಾದ ಕಣ್ಣುಗಳುಳ್ಳ, ಮನ್ಮಥನಿಗೆ ಶತ್ರುವಾದ, ನಿಂದೆಗೆ ಅನರ್ಹನಾದ, ಪೂರ್ಣಜ್ಞಾನವುಳ್ಳ ಇಂದ್ರಾದಿ ದೇವತೆಗಳಿಗೂ ಒಡೆಯನಾದ ಈ ವಿಶ್ವನಾಥನನ್ನು ಸೇವಿಸು.

**ವಂದಾರುನಾರದ ಸನಂದನ ಮುಖ್ಯ ಯೋಗಿ**
**ವೃಂದೈಃ ಪ್ರವಂದ್ಯಚರಿತ್ರೈಃ ಪರಿತಶ್ಚ ಸೇವ್ಯಮ್ ।**
**ಇಂದಿಂದಿರೋಪಮಸಿತೇತರ ಕಂಠಕಾಂತಿಂ**
**ಸೌಂದರ್ಯಮೂರ್ತಿ ಮಿಮಮಾಶ್ರಯ ವಿಶ್ವನಾಥಮ್ ॥ 4 ॥**

ಸ್ತುತಿಸಲು ಯೋಗ್ಯವಾದ ಆಚರಣೆಯುಳ್ಳ, ಯಾವಾಗಲೂ ಹರಿಯನ್ನು ನಮಸ್ಕರಿಸುವ ಸ್ವಭಾವವುಳ್ಳ ನಾರದ ಸನಂದಾದಿ ಯೋಗಿಗಳಿಂದ, ಸುತ್ತಲೂ, ಸೇವಿಸಲ್ಪಡುತ್ತಿರುವ, ಭ್ರಮರದಂತಹ ಕಪ್ಪಾದ ಕಂಠದ ಕಾಂತಿಯುಳ್ಳ, ಸೌಂದರ್ಯ ಸ್ವರೂಪದ ಈ ವಿಶ್ವನಾಥನನ್ನು ಸೇವಿಸು.

**ಛಂದಶ್ಚಯಸ್ತುತ ಚರಿತ್ರ ಪುರತ್ರಯಾರೇ**
**ಕುಂದ ಪ್ರಸೂನಕೃತಸೇವನ ತೃಪ್ತ ಚಿತ್ತ ।**
**ತ್ವಾಂ ದೀನ ಬಂಧು ಮರುಣೇಂದುಲಸತ್ಕಪರ್ದಂ**
**ವಂದೇಽರಿಮರ್ದನ ಸುಹೃದ್ಧನ ವಿಶ್ವನಾಥ ॥ 5 ॥**

ಇಮಾರುದ್ರಾಯ ಇತ್ಯಾದಿ ರುದ್ರಸೂಕ್ತ, ನಮಕ, ಚಮಕ ಮೊದಲಾದ ವೇದಗಳ ಸಮೂಹದಿಂದ ಹೊಗಳಲ್ಪಟ್ಟ ಮಹಿಮೆಯುಳ್ಳ, ತ್ರಿಪುರ ಸಂಹಾರಕನಾದ, ಕೋಲು ಮಲ್ಲಿಗೆಯ ಹೂಗಳಿಂದ ಮಾಡಲ್ಪಟ್ಟ ಪೂಜೆಯಿಂದ ಸಂತೋಷಗೊಂಡ ಮನಸ್ಸುಳ್ಳ, ಶತ್ರು ಸಂಹಾರಕನಾದ, ಸದ್ ಭಕ್ತರಿಗೆ ನಿಧಿಯಂತಿರುವ, ನಸುಗೆಂಪು ಬಣ್ಣ, ಚಂದ್ರನ ಕಲೆಯಿಂದ ಶೋಭಿತವಾದ ಜಟೆಯುಳ್ಳ ವಿಶ್ವನಾಥನನ್ನು ನಮಸ್ಕರಿಸುತ್ತೇನೆ.

## ಅರುಣಾಚಲೇಶ್ವರ (ತಿರುವಣ್ಣಾಮಲೈ)

**ಫಣಿಗಣವರ ಭೂಷಃ ಪಾರ್ವತೀಶ್ಲಾಘ್ಯವೇಷಃ**
**ಖಲಜನಕೃತರೋಷಃ ಖಂಡಿತಾತ್ಮೀಯ ದೋಷಃ ।**
**ಸದರುಣ ಗಿರಿವಾಸಃ ಶಕ್ರಸೂರ್ಯಾದ್ಯಧೀಶಃ**
**ಪರಿಹೃತ ಭವ ಪಾಶಃ ಪಾತು ಮಾಂ ಪಾರ್ವತೀಶಃ ॥**

ಸರ್ಪಗಳ ಸಮೂಹವೇ ಶ್ರೇಷ್ಠವಾದ ಆಭರಣವಾಗುಳ್ಳ, ಪಾರ್ವತಿಯಿಂದ ಹೊಗಳಿಸಿಕೊಳ್ಳಲ್ಪಟ್ಟ ವೇಷವುಳ್ಳ, ದುರ್ಜನರಲ್ಲಿ ಸಿಟ್ಟನ್ನು ಮಾಡುವ, ತನ್ನ ಭಕ್ತರ ದೋಷವನ್ನು ಪರಿಹರಿಸುವ, ಇಂದ್ರ ಸೂರ್ಯ ಮೊದಲಾದ ದೇವತೆಗಳಿಗೆ ಒಡೆಯನಾದ, ಸಂಸಾರ ಪಾಶವನ್ನು ಪರಿಹರಿಸುವ, ಉತ್ತಮವಾದ ಅರುಣಗಿರಿಯಲ್ಲಿ ವಾಸ ಮಾಡುವ, ಪಾರ್ವತೀ ಪತಿಯಾದ ಈಶ್ವರನು ನನ್ನನ್ನು ಕಾಪಾಡಲಿ.

## ವೃದ್ಧಾಚಲೇಶ್ವರ

**ವೃದ್ಧಾಚಲ ಕೃತಾವಾಸಸ್ಸದ್ಯೋಜಾತ ಸ್ತ್ರಿಲೋಚನಃ ।**
**ಅದ್ಯೈವ ಜ್ಞಾನನಯನಂ ವರ್ಧಯತ್ವಚಲಂ ಮಯಿ ॥**

ವೃದ್ಧಾಚಲದಲ್ಲಿ ವಾಸ ಮಾಡಿರುವ, ಸದ್ಯೋಜಾತ ಎಂಬೆಸರಿನ ಮೂರು ಕಣ್ಣುಗಳುಳ್ಳ ಶಿವನು, ಈಗಲೇ ನನ್ನಲ್ಲಿ ಸ್ಥಿರವಾಗಿ ಜ್ಞಾನ ದೃಷ್ಟಿಯನ್ನು ಬೆಳೆಸಲಿ.

**ಹರಾಯ ಭಜಕಾನಿಷ್ಟ ಹರಾಯ ಪುರವೈರಿಣೇ ।**
**ಭವಾಯ ಭವತೇ ಭೂಯಾಚ್ಛಿವಾಯ ಶಿರಸಾನಮಃ ॥**

ದುರ್ಜನರ ದುರಭಿಲಾಷೆಯನ್ನು ನಾಶ ಮಾಡುವ, ಭಕ್ತರ ಅನಿಷ್ಟವನ್ನು ಪರಿಹರಿಸುವ, ತ್ರಿಪುರಾಸುರ ಸಂಹಾರಕನಾದ ಮಂಗಲ ಸ್ವರೂಪಿಯಾದ ಮಹಾದೇವನಾದ ನಿನಗೆ ಶಿರಸಾ ನಮಸ್ಕಾರವಿರಲಿ.

## ಕಾಶೀ ವಿಶ್ವನಾಥ

**ದೋಷಂ ಮೇ ಹರ ಹೇ ಹರೇತಿ ಪತಿತಂ ಪಾದೇ ನಖಚ್ಛದ್ಮನಾ**
**ನಿರ್ದೋಷಂ ಮೃಗಬಿಂಬಮೇಣ ಹರಣಾತ್ ಕೃತ್ವೈವ ಮೂರ್ಧ್ನಿ ನ್ಯಧಾತ್ ।**
**ಗಂಗಾತೀರ ನಿವಾಸತಃ ಶುಚಿತಮಂ ಕುರ್ವನ್ನಿವಾಹೀಶ್ವರಾಸಂಗಾತ್**
**ತತ್ಪ್ರಥಮನ್ನಿವ ಪ್ರತಿದಿನಂ ಪಾಯಾತ್ ಸ ಮೃತ್ಯುಂಜಯಃ ॥**

ಎಲೈ ಈಶ್ವರನೇ ನನ್ನ ಕಳಂಕವನ್ನು ಹೋಗಲಾಡಿಸೆಂದು ಭಕ್ತನೊಬ್ಬ ಬೇಡಿದ. ಅರ್ಧಚಂದ್ರಾಕಾರವಾಗಿ, ಶುಭ್ರವಾಗಿಯೂ, ಕಾಂತಿಯುಕ್ತವಾಗಿಯೂ ಇರುವ ಈಶ್ವರನ ಕಾಲಿನ ಉಗುರುಗಳು ಚಂದ್ರನಂತಿವೆ. ಅಂತಹ ಉಗುರುಗಳ ವ್ಯಾಜದಿಂದ ಚಂದ್ರನು ಈಶ್ವರನ ಕಾಲಿಗೆ ಬಿದ್ದು "ಎಲೈ ಮಹಾದೇವನೇ ನನ್ನ ಈ ಜಿಂಕೆಯೆಂಬ ಕಲಂಕವನ್ನು ಪರಿಹರಿಸು" ಎಂದು ಬೇಡಿಕೊಂಡನು. ಆಗ, ಈಶ್ವರನು ಚಂದ್ರನಲ್ಲಿರುವ ಜಿಂಕೆಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡು, ಚಂದ್ರನನ್ನು ನಿರ್ದೋಷನನ್ನಾಗಿಸಿ, ಅವನನ್ನು ತನ್ನ ತಲೆಯ ಮೇಲಿಟ್ಟುಕೊಂಡನು. ಅಷ್ಟೇ ಅಲ್ಲ ಚಂದ್ರನನ್ನು ತನ್ನ ತಲೆಯ ಮೇಲಿರುವ ಗಂಗೆಯ ಸಮೀಪವೇ ಇಟ್ಟುಕೊಂಡು, ಅವನನ್ನು ಮತ್ತಷ್ಟು ಪವಿತ್ರನನ್ನಾಗಿ ಮಾಡುವಂತೆ ಕಾಣಿಸುತ್ತಾನೆ. ಚಂದ್ರನು ಕಳಂಕರಹಿತನು ಎಂಬ ವಿಷಯವನ್ನು ಜಟೆಯಲ್ಲಿ ಧರಿಸಿರುವ ಹಾವುಗಳಿಂದ ಪ್ರಕಟಪಡಿಸುತ್ತಾನೆ. ಹೀಗೆ ಚಂದ್ರಶೇಖರನಾದ ಮೃತ್ಯುಂಜಯ ರುದ್ರನು ಪ್ರತಿದಿನವೂ ಕಾಪಾಡಲಿ.

## ಸರಸಭಾರತೀ ವಿಲಾಸದಲ್ಲಿ ಶಿವಸ್ತುತಿ

ಗಂಗಾಧರಂ ಜಟಾಜೂಟವಿನ್ಯಸ್ತೇಂದು ಕಲೋಜ್ವಲಂ ।
ಪೀತಶ್ವೇತಾರುಣ ಹರಿಚ್ಛ್ಯಾಮಾನನ ಸರೋರುಹಂ ॥ 1 ॥

ತ್ರಿನೇತ್ರ ಪಂಕ್ತ್ಯಾ ಲಸಿತಪಂಚವಕ್ತ್ರಂ ಶುಚಿಸ್ಮಿತಂ ।
ಊರ್ಧ್ವಪುಂಡ್ರಧರಂ ಚಕ್ರ ಶಂಖಾಂಕಿತ ಭುಜದ್ವಯಮ್ ॥ 2 ॥

ಪದ್ಮಾಕ್ಷ ತುಳಸೀಮಾಲಾ ವಿದ್ಯೋತಿತ ಶಿರೋಧರಂ ।
ನೀಲಗ್ರೀಽವಂ ಲಸದ್ರತ್ನಭಾಸ್ವರಾಹೀಶ ಭೂಷಣಂ ॥ 3 ॥

ಮೃಗಶೂಲವರಾಭೀತಿಹಸ್ತಂ ಸ್ಫಟಿಕಸನ್ನಿಭಂ ।
ಗೌರೀಮನೋಹರತನುಂ ಗೌರ ನಂದೀಶ ವಾಹನಂ ॥ 4 ॥

ಸದಾಧ್ಯಾತೃ ಬುಧಾಭೀಷ್ಟ ಪ್ರದಾನೈಕ ಧುರಂಧರಂ ।
ಹರೇಃ ಪ್ರಿಯಂ ಧ್ಯಾನರತಂ ಸ್ಮರಾಮ್ಯಘಹರಂ ಹರಂ ॥ 5 ॥

ಗಂಗೆಯನ್ನು ತಲೆಯಲ್ಲಿ ಧರಿಸಿದ, ಜಟೆಯ ಗಂಟನಲ್ಲಿ ಧರಿಸಿದ ಚಂದ್ರನ ಕಲೆಯಿಂದ ಪ್ರಕಾಶಿಸುವ, ಹಳದಿ, ಬಿಸಿ, ನಸುಗೆಂಪು, ಹಸಿರು, ಕಪ್ಪು ಬಣ್ಣಗಳಿಂದ ಕೂಡಿದ ಐದು ಮುಖ ಕಮಲಗಳುಳ್ಳ, ಮೂರು ಕಣ್ಣುಗಳ ಸಾಲುಗಳಿಂದ ಶೋಭಿಸುವ ಐದು ಮುಖಗಳುಳ್ಳ, ನಿರ್ಮಲವಾದ ಮುಗುಳು ನಗುವುಳ್ಳ ಊರ್ಧ್ವ ಪುಂಡ್ರವನ್ನು ಧರಿಸಿರುವ, ಚಕ್ರ ಶಂಖಗಳಿಂದ ಅಂಕಿತವಾದ ಎರಡು ಬಾಹುಗಳುಳ್ಳ, ಪದ್ಮಾಕ್ಷಮಾಲೆ ಮತ್ತು ತುಳಸೀ ಮಾಲೆಗಳಿಂದ ಪ್ರಕಾಶಿಸುತ್ತಿರುವ ಕುತ್ತಿಗೆಯುಳ್ಳ, ಕಪ್ಪಾದ ಕಂಠವುಳ್ಳ, ಪ್ರಕಾಶಿಸುವ ರತ್ನಗಳಿಂದ ಹೊಳೆಯುವ ಸರ್ಪಶ್ರೇಷ್ಠನೇ ಭೂಷಣವಾಗುಳ್ಳ, ಒಂದು ಕೈಯಲ್ಲಿ ಜಿಂಕೆ ಮತ್ತೊಂದು ಕೈಯಲ್ಲಿ ಶೂಲಗಳನ್ನು, ವರ ಸೂಚಿಸುವ ಮತ್ತೊಂದು ಕೈ ಅಭಯ ಸೂಚಕ ಮತ್ತೊಂದು ಕೈ. ಹೀಗೆ ನಾಲ್ಕು ಕೈಗಳುಳ್ಳ, ಸ್ಫಟಿಕದಂತೆ ಶುಭ್ರನಾದ, ಗೌರೀದೇವಿಯ ಮನಸೆಳೆಯುವ ಸುಂದರ ಶರೀರವುಳ್ಳ, ಶುಭ್ರನಾದ ನಂದಿಯ ಮೇಲೆ ಕುಳಿತಿರುವ ಧ್ಯಾನಿಸುವ ಜ್ಞಾನಿಗಳಿಗೆ ಅಭೀಷ್ಟವನ್ನು ಕೊಡುವ ವಿಷಯದಲ್ಲಿ ಮೊದಲಿಗನಾದ, ನಾರಾಯಣನಿಗೆ ಪ್ರಿಯನಾದ, ಹರಿಯ ಧ್ಯಾನದಲ್ಲೇ ರತನಾದ, ಪಾಪನಾಶ ಮಾಡುವ ಹರನನ್ನು ಸ್ಮರಿಸುತ್ತೇನೆ.

ಗಿರೀಂದ್ರವಾಸ ಗೌರೀಶ ಪುರನಾಶ ಸತಾಂ ವಶ ।
ಫಣೀಂದ್ರಭೂಷ ನಿರ್ದೋಷ ಮಮ ತೋಷಕರೋ ಭವ ॥

ಕೈಲಾಸಪರ್ವತದಲ್ಲಿ ವಾಸಿಸುವ, ತ್ರಿಪುರಾಸುರ ಸಂಹಾರಕನೆ, ಸಜ್ಜನರಿಗೆ ಅಧೀನನೇ,

ಶ್ರೇಷ್ಠಸರ್ಪಗಳನ್ನು ಆಭರಣವಾಗಿ ಧರಿಸಿದವನೇ. ದೋಷದೂರನೇ. ಗಂಗೆಯೊಡೆಯನೇ ನನಗೆ ಸಂತೋಷಕರನಾಗು.

**ಶೂರ ತ್ರಿಶೂಲಧರ ಮಾರಮದಾಪಹಾರ**
**ವೀರಾಸನಸ್ಥ ವಿಧಿಪುತ್ರ ವಿಶಾಲನೇತ್ರ ।**
**ಧೀರ್ಮೇಽಸ್ತು ದೀನಶರಣೇ ದಿನನಾಥದೀಪ್ತೌ**
**ಕ್ರೂರಾಸುರೋದರ ವಿದಾರಣ ನಾರಸಿಂಹೇ ॥**

ಶೂರನೇ, ತ್ರಿಶೂಲ ಧರಿಸಿರುವವನೇ, ಮನ್ಮಥನ ಮದವನ್ನು ಸುಟ್ಟವನೇ, ವೀರಾಸನದಲ್ಲಿ ಕುಳಿತವನೇ, ಬ್ರಹ್ಮನ ಮಗನೇ, ವಿಶಾಲವಾದ ನೇತ್ರದವನೇ, ಪರಮೇಶ್ವರನೇ, ದೀನರಕ್ಷಕನಾದ ಸೂರ್ಯಪ್ರಕಾಶದಂತಹ ಪ್ರಕಾಶವುಳ್ಳ, ಕ್ರೂರ ಹಿರಣ್ಯಕಶಿಪುವಿನ ಹೊಟ್ಟೆಯನ್ನು ಬಗೆದ, ನಿನ್ನ ಉಪಾಸ್ಯಮೂರ್ತಿಯಾದ ನರಸಿಂಹ ದೇವರಲ್ಲಿ ನನ್ನ ಮನಸ್ಸು ನೆಲೆಸುವಂತೆ ಮಾಡು.

* * * * * *

# ದಾಸರ ಪದಗಳಲ್ಲಿ 'ಶಿವಸ್ತುತಿ'

## ಶ್ರೀ ಶ್ರೀಪಾದರಾಜರ ರಚನೆ

ವೃಷಭನೇರಿದ ವಿಷಧರನ್ಯಾರೇ ಪೇಳಮ್ಮಯ್ಯ ॥ ಪ ॥
ಹಸುಳೆ ಪಾರ್ವತಿಯ ತಪಸಿಗೆ ಮೆಚ್ಚಿದ ಜಟಾಮಂಡಲಧಾರಿ ಕಣಮ್ಮ ॥ ಅ.ಪ.॥

ಕೈಲಾಸಗಿರಿಯ ದೊರೆಯಿವನಮ್ಮ – ಅದು ಅಲ್ಲದೆ ಕೇಳೆ ।
ಬೈಲು ಸ್ಮಶಾನವು ಮನೆಯಿವಗಮ್ಮ – ಸಂಕರ್ಷಣನೆಂದು ಕೇಳೆ ಮ– ।
ಹಿಳೆಯೊಳು ಜನ ಪೆ...ಗಳುವರಮ್ಮ – ಇದು ನಿಜವಮ್ಮ ।
ನಾಲಿಗೆಸಾಸಿರ ಫಣಿಭೂಷಣನಮ್ಮ – ರಮೆಯರಸಗೆ ಇವ ಮೊಮ್ಮಗನಮ್ಮ ॥ 1॥

ಬಾಲೆ ದಾಕ್ಷಾಯಿಣಿಪತಿ ಇವನಮ್ಮ – ಮಾವನ ಯಾಗದಲಿ
ಬಾಳ ಕೃತ್ಯಗಳ ನಡೆಸಿದನಮ್ಮ – ಸಾಗರದಲಿ ಪುಟ್ಟಿದ ।
ಕಾಲಕೂಟವ ಭಕ್ಷಿಸಿದೆನಮ್ಮ – ರಾಮನ ದಯವಮ್ಮ ।
ಮೇಲೆ ಉಳಿಯಲು ಶೇಷಗರಳವು – ನೀಲಕಂಠನೆಂದೆನಿಸಿದನಮ್ಮ ॥ 2 ॥

ಹರನೊಂದಿನ ವೈಕುಂಠಕೆ ಬರಲು – ತಾತಗೆ ವಂದಿಸಲು ।
ತರುಣಿರೂಪವ ನೋಡಬೇಕೆನಲು – ಹರಿ ತಾ ನಸುನಗಲು ।
ಕರೆದು ಸೈರಿಸಲಾರೆ ನೀ ಎನಲು – ಹಠದಿ ಕುಳ್ಳಿರಲು ।
ಕರುಣಿಗಳರಸನು ಹರನ ಮನವ ನೋಡಿ ಅರುಣೋದಯಕೆ
ಬಾರೆಂದು ಕಳುಹಿದ ॥ 3 ॥

ಅರುಣೋದಯಕೆ ಗಂಗಾಧರ ಬರಲು – ಹದಿನಾರು ವರುಷದ ತರುಣೀರೂಪದಿ
ಹರಿ ವನದೊಳಗಿರಲು – ಚರಣನಖಾಗ್ರದಿ ಧರಣಿ ಬರೆಯುತ ನಿಂತಿರಲು –
ಸೆರಗ ಪಿಡಿಯ ಬರಲು
ಕರದಿ ಶಂಖ ಗದೆ ಚಕ್ರ ತೋರಲು – ಹರನು ನಾಚಿ ತಲೆತಗ್ಗಿಸಿ ನಿಂತ ॥ 4 ॥

ಮಂಗಳಾಂಗನೆ ಮಾರಜನಕನೆ – ನ ಮಾಡಿದ ತಪ್ಪುಪ್ಪು
ಹಿಂಗದೆ ಕ್ಷಮಿಸೋ ಯದುಕುಲತಿಲಕ – ವಕ್ಷದೊಳೊಪ್ಪವ ನಿ–
ಸ್ಸಂಗನೆ ಅರಿಯಳು ನಖಮಹಿಮಾಂಕ – ಹೀಗೆನುತಲಿ ತವಕ
ರಂಗವಿಠಲನ ಪದಗಳ ಪಿಡಿದು ಸಾಷ್ಟಾಂಗವೆರಗಿ ಕೈಲಾಸಕೆ ನಡೆದ ॥ 5 ॥

## ವ್ಯಾಸರಾಯರ ರಚನೆ

ನಮೋ ಪಾರ್ವತಿ ಪತಿನುತ ಜನಪರ ನಮೋ ವಿರೂಪಾಕ್ಷ ॥ ಪ ॥

ರಮಾರಮಣನಲಿ ಅಮರಭಕುತಿ ಕೊಡು ನಮೋ ವಿಶಾಲಾಕ್ಷ ॥ ಅ.ಪ. ॥

ನೀಲಕಂಠ ತ್ರಿಶೂಲಢಮರು ಹಸ್ತಾಲಂಕ್ರತ ರಕ್ಷ
ಪಾಲನೇತ್ರ ಕಪಾಲರುಂಡ ಮಣಿಮಾಲ ಧ್ರತವಕ್ಷ
ಶೀಲರಮ್ಯ ವಿಶಾಲ ಸುಗುಣ ಸಲ್ಲೀಲಸುರಾಧ್ಯಕ್ಷ
ಶ್ರೀಲಕುಮಿಶಣನ ಓಲೈಸುವ ಭಕ್ತಾವಳಿಗಳ ಪಕ್ಷ ॥ 1 ॥

ವಾಸವನುತ ಹರಿದಾಸ ಈಶ ಕೈಲಾಸ ವಾಸದೇವ
ದಾಸರಥಿಯ ಔಪಾಸಕ ಸುಜನರ ಪೋಷಿಪ ಪ್ರಭಾವ
ಬಾಧಿಸುತಿಹುದ ಶೇಷಜೀವರಿಗೆ ಈಶನೆಂಬ ಭಾವ
ಶ್ರೀಶನಲ್ಲಿ ಇರಿಸು ಮನವ ಗಿರಿಜೇಶ ಮಹಾದೇವಾ ॥ 2 ॥

ಮೃತ್ಯುಂಜಯ ನಿನ್ನುತ್ತಮ ಪದಯುಗ ಭ್ರತ್ಯಾನುಸರ್ವತ್ರ
ಹತ್ತಿರ ಕರೆದು ಅಪತ್ಯನಂದದಿ ಪೊರೆಯುತ್ತಿರೊ ತ್ರಿನೇತ್ರ
ಹೆತ್ತಿಗನಂತೆ ಕಾಯುತ್ತಿಹೆ ಬಾಣನ ಸತ್ಯದಿ ಸುಚರಿತ್ರ
ಕರ್ತ್ರ ಉಡುಪಿ ಸರ್ವೋತ್ತಮ ಕೃಷ್ಣನ ಪೌತ್ರಕ್ರ ಪಾತ್ರ ॥ 3 ॥

. . .

## ಶ್ರೀವಾದಿರಾಜತೀರ್ಥರ ರಚನೆ

*ಧ್ರುವತಾಳ*

ಅಂಬಿಕಾಪತಿ ಉಮಾಪತಿಯೆಂದು ವೇದ ತ್ರಿ-
ಯಂಬಕನ ಗೌರಿಯರಸನ ತುತಿಸುತಿದಕೊ
ಸಾಂಬಶಿವನೆಂಬುವನು ಇವನೆ ಆದಡೆ ಜಡೆಯ
ಸಂಭ್ರಮದಿಂದ ಗಂಗೆ ಗರ್ವಿಸುವಳು
'ಡಂಭ ಏಕೋರುದ್ರ ನದ್ವಿತೀಯವದನ್ತೌ'
ಯೆಂಬ ಶ್ರುತಿ ಇನ್ನೊಬ್ಬ ಶಿವನಿಗವಸಖಿನು ಒ-

ಡಂಬಡದು ವಿಷ್ಣುವೆಂಬವತಾರ ಮೂಲರೂಪ
ಸಂಭವಿಪ ಬ್ರಹ್ಮರುದ್ರರ ಸೃಷ್ಟಿಗೆ
ಇಂಬುಸಲ್ಲುವುದು 'ಸೃಷ್ಟ್ಯಾಧಿಕಾ ಏಕೋ ಮಹಾನೀ'
ಯೆಂಬ ಹಿರಿಯರ ಮತವ ಸಮತವೆಂದು
ನಂಬು ದನುಜ ಸ್ತಂಭಸಂಭವ ರುದ್ರಶೀರ್ಷಕನು ಪುರಹರನೆ ಗಡ
ಅಂಬುಜಾಕ್ಷ ಹಯವದನ ಅಖಿಳರೊಡೆಯ ॥ 1 ॥

*ಮಠ್ಯತಾಳ*

ಆರು ಪುರಾಣ ಗೌರಿಯ ಗಂಡನವು ಮ-
ತ್ತಾರು ಪುರಾಣ ಚತುರಮುಖನವು
ಆರು ಪುರಾಣ ಹಯವದನವು
ತೋರೊ ಸಾಂಬಶಿವನ ಪುರಾಣವ
ಭಾರತ ಪುರಾಣದೊಳಗಿಲ್ಲದ ಕಾರಣ ಶಶಶೃಂಗ ನಿನ್ನ ಶಿವ ॥ 2 ॥

*ತ್ರಿಪುಟತಾಳ*

ಕೈಲಾಸ ರುದ್ರನದು ವೈಕುಂಠಲೋಕ ನಮ್ಮ
ಶ್ರೀಲೋಲನಿಹಲೋಕ ಜಲಜಸಂಭವನಿಗೆ
ಮೂಲೋಕವಲ್ಲದೆ ಮೇಲಿನ ಸತ್ಯಲೋಕ
ಪೇಳೊ ನಿನ್ನ ಸಾಂಬಶಿವನ ಲೋಕ
ಖೂಳಜನರೊಡನಾಡದಿರು ದುರುಕ್ತಿಯನು ಬಿಡು
ಸಾರೊ ಸಜ್ಜನ ಕುಲದೈವ ಹಯವದನನ್ನ
ಆಳಾಗಿ ಬದುಕು ಶ್ರೀಹರಿ ಸರ್ವೋತ್ತಮನೆಂಬ
ಸಾರಮತವನು ಸೇವಿಸು ಮನುಜ ॥ 3 ॥

*ರೂಪಕತಾಳ*

ಶ್ರುತಿಪುರಾಣದೊಳಿಲ್ಲದ ಕ್ಷಿತಿಯೊಳರ್ಚನೆಗಲ್ಲ ದಾ-
ದಿತಿ ದೇವಕ್ಕಳೊಲ್ಲದ ಮತಿವಂತರ [ಮುಂದೆ] ನಿಲ್ಲದ
ಮತವಿದ್ಯಾತಕೊಸಲ್ಲದು ನಮ್ಮ
ಗತಿ ಹಯವದನ ಬಲ್ಲಿದ ॥ 4 ॥

*ಝಂಪೆತಾಳ*

ಪರಶಿವ ನಿರಾಕಾರನಾದಡೆ ನಿರ್ಗುಣ ಬೊಮ್ಮ
ಹರಶಿವಾದಿ ಪೆಸರು ಪಂಚಮುಖಗನಿಗಲ್ಲದೆ ಸಲ್ಲ
ಶರೀರವೆರಸಿದಡೆ ಜನ್ಮ ಮರಣಗಳು ಬಿಡುವು ನಿನ್ನ
ದುರುತ್ಸಹ ಬರಿದೆ ಹೋಯಿತು
ಪರಶಿವ ಪರದೇವನೆಂದು ವಾಸುದೇವಗೆ ಸಾ-
ಸಿರನಾಮದೊಳಿದದ ಕಾರಣ ಪರಶಿವನೆ
ಪೆರತೊಬ್ಬ ಶಿವನಿಲ್ಲ ಪರಾತ್ಪರ ನಮ್ಮ
ಸಿರಿದೇವಿಯರಸ ಹಯವದನ ಕಾಣೊ ॥ 5 ॥

*ರೂಪಕತಾಳ*

ತ್ರಯತ್ರಿಂಶದ್ದೈದೇವ ಸೋಮಪಾಯೆಂದು
ಪ್ರಿಯಾತ್ರಿಯಧಾಮ ಮೂವರು ಜೀವರು ನಿ-
ಶ್ಚಯಿಸಿ ಪೇಳಿದ ಕಾರಣದಿ ಇನ್ನೊಂದು
ಹೆದ್ದೈವ ಮತ್ತೆಲ್ಲಿಹುದೊ
ನ್ಯಾಯವೆಲ್ಲಿಹುದೊ ಪೇಳಲೊ ಕುವಾದಿ
ನ್ಯಾಯಕೋವಿದರೊಳು ಶ್ರೀ
ಹಯವದನ ಬೊಮ್ಮ ಶಿವರೆಂಬೊ ಈ
ನ್ಯಾಯವು ತಪ್ಪದು ಇನ್ನೊಬ್ಬರೊಪ್ಪರೊ ॥ 6 ॥

*ಜತೆ*

ಹಯವದನನೇಗತಿ ಹಯವದನನೇ ಪತಿ
ಹಯವದನನೇ ಸುರಪತಿ ಸುರಾಸುರರುಗಳಿಗೆ ॥ 7 ॥

. . . .

ಧವಳ ಗಂಗೆಯ ಗಂಗಾಧರ ಮಹಾಲಿಂಗ
ಮಾಧವನ ತೋರಿಸಯ್ಯ ಗುರುಕುಲೋತ್ತುಂಗ ॥ ಪ ॥

ಅರ್ಚಿಸಿದವರಿಗಭೀಷ್ಟವ ಕೊಡುವ
ಹೆಚ್ಚಿದ ಅಘಗಳ ತರಿದು ಬಿಸುಟುವಾ

ದುಶ್ಚರಿತಗಳೆಲ್ಲ ದೂರದಲ್ಲಿಡುವ
ನಮ್ಮಚ್ಯುತಗಲ್ಲದ ಅಸುರರ ಬಡಿವಾ ॥ 1 ॥

ಮಾರನ ಗೆಲಿದ ಮನೋಹರ ಮೂರ್ತಿ
ಸಾಧು ಸಜ್ಜನರಿಗೆ ಸುರ ಚಕ್ರವರ್ತಿ
ಧಾರುಣಿಯೊಳಗೆ ತುಂಬಿತು ನಿಮ್ಮ ಕೀರ್ತಿ
ಮುರಾರಿಯ ತೋರಿಸಯ್ಯ ನಿನಗೆ ಶರಣಾರ್ಥಿ ॥ 2 ॥

ಚೆನ್ನ ಪ್ರಸನ್ನ ಶ್ರೀ ಹಯವದನನ್ನ
ಅನುದಿನ ನೆನೆವಂತೆ ಮಾಡೊ ನೀ ಎನ್ನ
ಅನ್ಯನಲ್ಲವೋ ನಾನು ಗುರುವೆಂಬೆ ನಿನ್ನ
ಇನ್ನಾದರು ತೋರೋ ಹರಿಯ ಮುಕ್ಕಣ್ಣ ॥ 3 ॥

. . .

## ಶ್ರೀಪುರಂದರವಿಠಲದಾಸರ ರಚನೆ

ಚಂದ್ರಚೂಡ ಶಿವಶಂಕರ ಪಾರ್ವತಿ ರಮಣನೆ
ನಿನಗೆ ನಮೋ ನಮೋ ॥ ಪ ॥

ಸುಂದರ ಮೃಗದರ ಪಿನಾಕಧರಹರ
ಗಂಗಾಧರ ಶಿರ ಗಜ ಚರ್ಮಾಂಬರಧರ ॥ ಅ.ಪ. ॥

ನಂದಿ ವಾಹನಾನಂದಿಂದ ಮೂರ್ಜಗದಿ ಮೆರೆವನು ನೀನೆ
ಕಂದರ್ಪನ ಕ್ರೋಧದಿಂದ ಕಣ್ತೆರೆದು ಕೊಂದ ಉಗ್ರನು ನೀನೆ
ಇಂದಿರೇಶ ಶ್ರೀ ರಾಮನ ಪಾದವ ಚಂದದಿ ಪೊಗಳುವನು ನೀನೆ ॥ 1 ॥

ಬಾಲ ಮೃಕಂಡನ ಕಾಲನು ಎಳೆವಾಗ ಪಲಿಸಿದವನು ನೀನೆ
ಕಾಲಕೂಟ ವಿಷವ ಪಾನ ಮಾಡಿದ ನೀಲಕಂಠ ನೀನೇ
ವಾಲಯದಿ ಕಪಾಲವ ಪಿಡಿದು ಭಿಕ್ಷೆ ಬೇಡೋ ದಿಗಂಬರನು ನೀನೆ
ಜಾಲ ಮಾಡುವ ಗೋಪಾಲನೆಂಬ ಪೆಣ್ಣಿಗೆ ಮರುಳಾದವನು ನೀನೆ ॥ 2 ॥

ಧರೆಗೆ ದಕ್ಷಿಣ ಕಾವೇರಿ ತೀರ ಕುಂಭಾಪುರ ನಿವಾಸನು ನೀನೆ
ಕರದಲಿ ವೀಣೆಯ ಗಾನವ ಮಾಡುವ ನಮ್ಮ ಉರಗ ಭೂಷಣನು

ಕೊರಳಲಿ ಭಸ್ಮ ರುದ್ರಾಕ್ಷಿ ಧರಿಸಿದ ಪರಮ ವೈಷ್ಣವನು ನೀನೆ
ಗರುಡ ಗಮನ ಶ್ರೀಪುರಂದರವಿಠಲಗೆ ಪ್ರಾಣಪ್ರಿಯನು ನೀನೆ ॥ 3 ॥

. . .

ಜಂಗಮರು ನಾವು ಜಗದೊಳು ॥ ಪ ॥

ಜಂಗಮರು ನಾವು ಲಿಂಗಾಂಗಿಗಳು
ಮಂಗಳವಂತರು ಭವಿಗಳೆಂತೆಂಬರಿ ॥ ಅ.ಪ. ॥

ಹರಗುರು ದೈವ ಕೇಶವ ನಮ್ಮ ಮನೆದೈವ
ವರದ ಮೋಹನ ಗುರುಶಾಂತೇಶ
ಹರಗುರು ದ್ರೋಹ ಮಾಡಿದ ಪರವಾದಿಯು
ರೌರವ ನರಕದಿ ಮುಳುಗುವುದೆ ಸಿದ್ಧ ॥ 1 ॥

ವಿಭೂತಿ ನಮಗುಂಟು ವಿಶ್ವೇಶ ನಮಗುಂಟು
ಶೋಭನ ನಾಮ ಮುದ್ರೆಗಳುಂಟು
ಶ್ರೀ ಭಾಗೀರತಿಯಗಣಿತ ಮಜ್ಜನವುಂಟು
ಸೌಭಾಗ್ಯವೀವ ಮಹಂತನ ಮಠದವರು ॥ 2 ॥

ವಿರಕ್ತರು ನಾವು ಶೀಲವಂತರು ನಾವು
ವೀರಭದ್ರಪ್ರಿಯ ಭಕ್ತರು ನಾವು
ಕಾರಣಕರ್ತ ಪುರಂದರವಿಠಲನ
ಕಾರುಣ್ಯಕೆ ಮುಖ್ಯಪಾತ್ರರು ನಾವು ॥ 3 ॥

. . .

ಶಿವ ದರುಶನ ನಮಗಾಯಿತು ಕೇಳೆ
ಶಿವರಾತ್ರಿಯ ಜಾಗರಣೆ ॥ ಪ ॥

ಪಾತಾಳಗಂಗೆಯ ಸ್ನಾನವ ಮಾಡಲು ಪಾತಕವೆಲ್ಲ ಪರಿಹಾರವು
ಜ್ಯೋತಿರ್ಲಿಂಗನ ಧ್ಯಾನವ ಮಾಡಲು ದ್ಯೂತಗಳಿಲ್ಲ ಅನುದಿನವು ॥ 1 ॥

ಬೇಡಿದ ವರಗಳ ಕೊಡುವನು ತಾಯಿ ಬ್ರಹ್ಮನ ರಾಣಿಯ ನೋಡುವನು
ಆಡುತ ಪಾಡುತ ಏರುತ ಬಸವನ ಆನಂದದಲಿ ನಲಿದಾಡುವನು ॥ 2 ॥

ಶಿಖರವ ಕಂಡೆನು ಪುರಂದರವಿಠಲನ ಹರಿನಾರಾಯಣ ಧ್ಯಾನದಲೆ ॥ 3 ॥

## ಶ್ರೀಕನಕದಾಸರ ರಚನೆ

ಶಿವ ಶಿವ ಶಿವ ಎನ್ನಿರೊ–
ಮೂಜಗದವರೆಲ್ಲ ಶಿವ ಶಿವ ಶಿವ ಎನ್ನಿರೊ ॥ ಪ ॥

ಆಗಮ ಸಿದ್ಧಾಂತ ಮೂಲದ ಜಪವಿದು ಶಿವಶಿವಶಿವ ಎನ್ನಿರೋ–
ನಿಮ್ಮ ರೋಗದ ಮೂಲವ ಕೆಡಿಪ ಔಷಧವಿದು ಶಿವಶಿವಶಿವ ಎನ್ನಿರೊ ॥ ಅ.ಪ.॥

ಮನುಜ ಜನ್ಮದಿ ಹುಟ್ಟಿ ಮೈಮರೆದಿರಬೇಡಿ ಶಿವಶಿವಶಿವ ಎನ್ನಿರೋ–
ನಿಮ್ಮ ತನುಮನ ಪ್ರಾಣವ ವ್ಯರ್ಥವ ಮಾಡದೆ ಶಿವಶಿವಶಿವ ಎನ್ನಿರೊ
ಅಪರಾಧಕೋಟಿ ತ್ಯಜಿಸಬೇಕಾದರೆ ಶಿವಶಿವಶಿವ ಎನ್ನಿರೋ–
ಮುಂದೆಉಪಮಿತರೋರ್ಮಿತರರಿಯದ ಜಪವಿದು ಶಿವಶಿವಶಿವ ಎನ್ನಿರೊ ॥ 1॥

ಜವನ ಬಾಧೆಯ ನೀವು ಜಯಿಸಬೇಕಾದರೆ ಶಿವಶಿವಶಿವ ಎನ್ನಿರೋ–
ನಿಜಸವಿಮಲ ಮುಕ್ತಿಯ ಪಡೆಯಬೇಕಾದರೆ ಶಿವಶಿವಶಿವ ಎನ್ನಿರೊ
ಭುವನಕೆ ಬಲ್ಲಿದರಾಗಬೇಕಾದರೆ ಶಿವಶಿವಶಿವ ಎನ್ನಿರೋ–
ನೀವುಭವನ ಪದವಿಯನು ಪಡೆಯಬೇಕಾದರೆ ಶಿವಶಿವಶಿವ ಎನ್ನಿರೊ ॥ 2 ॥

ಗುರುಲಿಂಗ ಜಂಗಮವ ಅರಿಯಬೇಕಾದರೆ ಶಿವಶಿವಶಿವ ಎನ್ನಿರೋ–
ಮುಂದೆ ಪರಮಾತ್ಮನ ನೀವು ತಿಳಿಯಬೇಕಾದರೆ ಶಿವಶಿವಶಿವ ಎನ್ನಿರೊ
ಪೃಥ್ವಿಗೆ ಸದ್ಗುರು ಆಗಬೇಕಾದರೆ ಶಿವಶಿವಶಿವ ಎನ್ನಿರೋ–
ನೀವುತತ್ತ್ವಪತಿ ಆದಿಕೇಶವನ ಕೂಡಬೇಕಾದರೆ ಶಿವಶಿವಶಿವ ಎನ್ನಿರೊ ॥ 3 ॥

. . .

## ಶ್ರೀ ಗುರು ಮಹಿಪತಿದಾಸರ ರಚನೆ

ಶಿವಾ ಶಿವಾ ಮಹಾದೇವಾ । ಶಂಕರಾ ।
ಹರಹರ ಮಹಾದೇವಾ ॥ ಪ ॥

ಗಿರಿಜೆ ರಮಣ ವೃಷಬೇಂದ್ರ ವಾಹನಾ ।
ಸರಸಿ ಜಾರಿ ಮಿತ್ರಾನಲ ನಯನಾ ॥ 1 ॥

ಕರ್ಪುರ ಗೌರವ ಪಂಚಾನನಾ ।
ಸರ್ಪಭೂಷಣಂಗಜ ಮದಹರಣಾ ॥ 2 ॥

ಕರಿಚ-ರ್ಮಾಂಬರ ಸುರ ನದಿ ಧರಾ ।
ಗುರು ಮಹಿಪತಿ ಸುತ ಭಯ ಹರಣಾ ॥ 3 ॥

. . .

## ಶ್ರೀವಿಜಯದಾಸರ ರಚನೆ

ಕೈಲಾಸ ವಾಸ ಗೌರೀಶ ಈಶ
ತೈಲಧಾರೆಯಂತೆ ಮನಸು ಕೊಡೊ ಹರಿಯಲ್ಲಿ ಶಂಭೋ ॥ ಪ ॥

ಅಹೋರಾತ್ರಿಯಲ್ಲಿ ನಾನು ಅನುಚರಾಗ್ರಣಿಯಾಗಿ
ಮಹಿಯೊಳಗೆ ಚರಿಸಿದೆನೊ ಮಹದೇವನೆ
ಅಹಿ ಭೂಷಣನೆ ಎನ್ನ ಅವಗುಣಗಳೆಣಿಸದಲೆ
ವಿಹಿತ ಧರ್ಮದಿ ವಿಷ್ಣು ಭಕುತಿಯನು ಕೊಡೊ, ಶಂಭೋ ॥ 1 ॥

ಮನಸು ಕಾರಣವಲ್ಲ ಪಾಪಪುಣ್ಯಕ್ಕೆಲ್ಲ
ಆನಲಾಕ್ಷ ನಿನ್ನ ಪ್ರೇರಣೆಯಿಲ್ಲದೆ
ಧನುಜ ಗಜ ಮದಹಾರಿ ದಂಡ ಪ್ರಣಾಮವ ಮಾಳ್ಪೆ
ಮಣಿಸು ಈ ಶಿರವ ಸಜ್ಜನ ಚರಣ ಕಮಲದಲ್ಲಿ ಶಂಭೋ ॥ 2 ॥

ಭಾಗೀರಥಿ ಧರನೆ ಭಯವ ಪರಿಹರಿಸಯ್ಯ ಲೇ-
ಸಾಗಿ ನೀ ಸಲಹೊ ಸಂತತ ಶರ್ವದೇವ
ಭಾಗವತ ಜನಪ್ರಿಯ ವಿಜಯವಿಠಲನಂಘ್ರಿ
ಜಾಗಡು ಮಾಡದೆ ಭಜಿಪ ಭಾಗ್ಯವನು ಕೊಡೊ ಶಂಭೋ ॥ 3 ॥

. . .

ಲಿಂಗ ರಾಮಲಿಂಗ ಎನ್ನಂತರಂಗ
ಮಂಗಳಾಂಗನೆ ಸರ್ವೋತ್ತುಂಗನೇ ॥ ಪ ॥

ಮಂದಾಕಿನಿಧರಗೆ ಗಂಗಾಂಬು ಮಜ್ಜನವೇ
ಚಂದ್ರಮೌಳಿಗೆ ಗಂಧ ಕುಸುಮಾರ್ಪಣೆಯೇ ॥ 1 ॥

ಇಂದು ರವಿ ನೇತ್ರನಿಗೆ ಕರ್ಪೂರದಾರತಿಯೇ
ಕಂದರ್ಪ ಜಿತಗೆ ಮಿಗಿಲಾಪೇಕ್ಷೆಯೇ ॥ 2 ॥

ಘನ ವಿದ್ಯಾತುರಗೆ ಮಂತ್ರ ಕಲಾಪವೇ ?
ಧನಪತಿಯ ಸಖಿಗೆ ಕೈಕಾಣಿಕೆಯೇ ॥ 3 ॥

ಮನೆ ರಜತ ಪರ್ವತಗೆ ಫಣಿಯ ಆಭರಣವೇ
ಮನೋ ನಿಯಾಮಕಗೆ ಎನ್ನ ಬಿನ್ನಹವೇ ॥ 4 ॥

ವೈರಾಗ್ಯ ನಿಧಿಗೆ ಈ ವಿಷಯ ಪದಾರ್ಥವೇ
ಗೌರಿಯ ರಮಣಗೆ ಈ ಸ್ತೋತ್ರವೇ ॥ 5 ॥

ವೀರ ರಾಘವ ವಿಜಯವಿಠಲನ ನಿಜ ಹಸ್ತ
ವಾರಿಜ ದಳದಿಂದ ಉದ್ಧವಿಸಿದ ॥ 6 ॥

. . .

## ಶ್ರೀಜಗನ್ನಾಥವಿಠಲ ದಾಸರ ರಚನೆ

ಸೋಮಶಿವ ಶರ್ವ ಭವ ಶಿತಿಕಂಠ ನಿನ್ನ ಪದ
ತಾಮರಸಯುಗ್ಮಗಳಿಗಾನಮಿಸುವೆ ॥ ಪ ॥

ಕಾಮಹರ ಕೈಲಾಸ ಹೇಮಗಿರಿಯಾವಾಸ
ರಾಮನಾಮನ ಭಜಿಪ ಉಮೆಯರಸ ಶಂಭೋ ॥ ಅ ॥

ಮೃತ್ಯುಂಜಯ ಮೃಗಾಂಕ ಕೃತ್ತಿವಾಸ ಕೃಪಾಳೊ
ವಿತ್ತ ಪತಿ ಸಖ ವಿನಾಯಕನ ಜನಕ
ಭೃತ್ಯವರ್ಗಕೆ ಬಾಹಪಮೃತ್ಯು ಕಳೆದು ಸಂ-
ಪತ್ತು ಪಾಲಿಸುವುದು ನಿವೃತ್ತಿ ಸಂಗಮಪ ॥ 1 ॥

ಗೋಪತಿ ಧ್ವಜ ಘೋರ ಪಾಪ ಸಂಹರಣ ಹರಿ
ತೋಪಲೋಪಮ ಕಂಠ ಚಾಪಪಾಣೀ
ಶ್ರೀ ಪತಿಯ ಶ್ರೀನಾಭಿ ಕೂಪಸಂಭವತನಯ
ನೀ ಪಾಲಿಸೆಮ್ಮನು ವಿರೂಪಾಕ್ಷ ಗುರುವೆ ॥ 2 ॥

ಭಸಿತ ಭೂಷಿತಡಮರು ತಿಸುಳಗೈಯನೆ ಶಂಭೋ
ಕಿಸಲಯೋಪಮ ನವಿರ ಶಶಿಭೂಷಣ
ಅಸುರಾರಿಪು ಶ್ರೀ ಜಗನ್ನಾಥ ವಿಠಲನ ಪದ
ಬಿಸಜ ಧ್ಯಾನವನೀಯೊ ಹಸನಾಗಿ ಕಾಯೊ ॥ 3 ॥

## ಶ್ರೀಪ್ರಾಣೇಶವಿಠಲದಾಸರ ರಚನೆ

ಎಷ್ಟೋಹರಿಮರುತರ ಕೃಪಿ ನಿನ್ನಲ್ಲಿ ।
ಕೆಟ್ಟುದೇ ಭೂಷಣವಾಗಿಹುದೋ ಪಾರ್ವತೀ ರಮಣ ॥ ಪ ॥

ವಿಷವನ್ನೆ ಭೋಜನ ಮಾಡಿ ಜೀರ್ಣಿಸಿಕೊಂಡಿ ।
ವಸನಬಿಟ್ಟು ಜಿನಸ್ಥಿ ಭಸ್ಮ ಧರಿಸಿ ।
ವೃಷಭವಾಹನನಾಗಿ ಭೂತಪ್ರೇತಗಳೊಳು ಸ್ಮ- ।
ರಿಸದ ಭೂಮಿಯೊಳಿರಲು ಪೂಜಿಪರು ಸುರರೆಲ್ಲ ॥ 1 ॥

ತಂದೆ ತಲೆ ಕಡಿದುದಕೆಕುಂದುಹೊಂದದಲಿದ್ದೆ ।
ನಿಂದಿತನ ಶಿರದ ಮೇಲಿರಿಸಿಯಿದ್ದೆ ।
ಒಂದೊಂದು ನೀನೆ ಪರದೈವ ಎಂದು ಪೇಳ್ದೆ ।
ಗೋವಿಂದನಿಂದರ್ಚನೆಯ ಕೊಂಡೆ ಭಳಿ ಭಳಿರೆ ಶಿವ ॥ 2 ॥

ಗುರುವೆನಿಸಿಕೊಂಬೆ ಪ್ರಾಣೇಶ ವಿಠಲನೊಳು ।
ಮತ್ಸರಿಸುತಿಹ ಖಳರಿಗೆ ಇದಲ್ಲವೇನೊ ।
ಸರಿವಬ್ಬರಿಗೆ ಆಹನೆಂಬುವನು ಕೆಡುವ ನೀ ।
ಉರುಗನಂತಾಗಬೇಕೆಂದಾಗಿ ಮೆರೆದೆಲವೊ ॥ 3 ॥

. . .

## ಶ್ರೀ ಗುರುಜಗನ್ನಾಥವಿಠಲದಾಸರ ರಚನೆ

ಇಂದು ಶೇಖರ ಶಿವ ನಂದಿವಾಹನ ಶೂಲಿ
ಸ್ಕಂಧಗಣಪರ ತಾತ ದಂದಶೂಕಕಲಾಪ
ಮಂದಾಕಿನಿಧರ ಪುರಂದರ ಮುಖಸುರ
ವೃಂದವಿನುತ ಪಾದಾದಿಂದ ಶೋಭಿತ ದೇವ
ಕಂದು ಕಂಧರ ತ್ರಿಪುರ ಸಂದೋಹಹರ ಹರ
ವಂದಿಸಿ ಬೇಡುವೆ ಫಲ ಸಂದೇಹಮಾಡದಲಿತ್ತು
ನಂದ ನೀಡುವಿ ನೀನೆಂದು ನಿನ್ನಯ ಬಳಿಗೆ
ಬಂದೆನ್ನ ಮನೋರಥಾ ಇಂದು ಪೂರ್ತಿಸೋ ಗುರೋ
ಗಂಧವಾಹನ ತನಯಾ ಇಂದಿರಪತಿ ಗುರುಜಗನ್ನಾಥವಿಠಲಾ
ನಂದ ಬಡುವನಿದಕೆ ಸಂದೇಹ ಇನಿತಿಲ್ಲಾ

## ಶ್ರೀಪ್ರಸನ್ನವೆಂಕಟದಾಸರ ರಚನೆ

ಬಿಲ್ವೋದೇಶ್ವರ ಶ್ರೀ ಮದುಮಾವಲ್ಲಭ
ಸಂತತ ಪಾಲಯಮಾಂ ॥ ಪ ॥

ನಾಕಪವಂದ್ಯ ಕೃಪಾಕರ ಪಾಪನೇಕ ನಿವಾರಕ
ಮೂಕಹರಲೋಕೇಶೇಶ ನಿಶಾಕರ ಶೇಖರ
ಶ್ರೀಕರಕಾಯ ಪಿನಾಕಧರ ॥ 1 ॥

ಭುಜಗಾಭರಣ ಗಜಮದಹರಣ
ಗಜಚರ್ಮಾಂಬರ ಸುಜನವರದ್ವಿಜರವಿ ವೃಷಧ್ವ-
ಜಾಸಮಲೋಚನ ರಜನೀಚರ ತ್ರಿಪುರಜಮಥನ ॥ 2 ॥

ದುರ್ಧರ್ಷಾಂಧಕ ಮದರ್....ಕ ಶಂಭೋ
ನಿರ್ದೋಷ ಶ್ವೇತಾದ್ರಿ ಪ್ರಭೋಸ್ವರ್ಧುನಿಸಹಿತ
ಕಪರ್ದಿನ್ ಶಿವಶಿವ ಊರ್ಧ್ವ ಪಟಾರ್ಚಕವದನಭೋ ॥ 3 ॥

ಗರಕಂಧರ ವೃಷಚರ ಅದ್ಭುತ ನಿಕರಪರಿಚರ
ಪಾಂಡುರಗಾತ್ರಶಿರಮಾಲಾನ್ವಿತ
ಸ್ಫುರತ್ಕಪಾಲಿಸ್ಥರಹರಭವಸುಖಕರ ಮೂರ್ತೆ ॥ 4 ॥

ಶಂಕರ ಸುಗುಣಾಲಂಕೃತ ಭಕ್ತಾತಂಕವಿದೂರಕ
ಶಂಖ ರಥಾಂಗಾಂಕಿತ ಪ್ರಸನ್ವೆಂಕಟ
ನಾಯಕಕಿಂಕರಜನಪ್ರಿಯ ತ್ವಂ ಕೃಪಯಾ ॥ 5 ॥

. . .

## ಗುರುಗೋವಿಂದ ವಿಠಲದಾಸರ ರಚನೆ

ಶಿವ ದುರುಶನ ವೆನಗಾಯಿತೂ ನಮ್ಮ
ಭವ ಭಯ ಪರಿಹಾರವಾಯಿತು ॥ ಪ ॥

ಹತ್ತು ಮತ್ತೊಂದೆಂಬ ಇಂದ್ರಿಯದಭಿಮಾನಿ
ಭಕ್ತರಿಗ್ಹರಿಯಲಿ ಸಕ್ತಿಯ ಕೊಡುವಾ
ಉತ್ತಮ ತ್ರಯವೇದ ಗ್ರಂಥದ ಪಠಿ-
ಸುತ್ತ ಹಸ್ತಗಳಭಿನಯ ವಿಸ್ತರಿಸಿರುವಂಥ ।

ಕೃತ್ತಿವಾಸನ ಸಖ ಉತ್ತಮೋತ್ತಮನೆಂ
ಭೃತ್ಯರ ಸತ್ಸಂಗ ಇತ್ತು ಸಲಹೊದೂ
ನಿತ್ಯಮಂಗಳ ಮೂರ್ತಿ ಕರ್ತೃ ಶ್ರೀಹರಿ ಎಂಬ
ಉತ್ತಮೋತ್ತಮ ಮತಿ ಇತ್ತು ಪಾಲಿಪುದಯ್ಯ ।

ಹರಿಪದ ಜಲ ಸದ ಧರಿಸಿಹ ಹರನಿಗೇ
ಹರಹರನೆಂಬ ನರ ದುರಿತ ನಿಚಯವ
ಪರಿಹರವರಿದಲ್ಲ ಕರುಣಿ ಮೃತ್ಯುಂಜಯ
ಕರುಣದಿ ತೋರೋ ಗುರುಗೋವಿಂದ ವಿಠಲನ ।

. . . .

## ಶ್ರೀ ಕೆಂಭಾವಿ ಭೀಮದಾಸರ ರಚನೆ

ಹರನಾಡಿದ ತಾಂಡವ । ತೋಮ್ ತಕಝುಣ ಎಂದು ॥

ಶಿರದಲಿ ಧರಿಸಿದ ಸುರಗಂಗೆಯು ತಾ ।
ಭರದಿಂದಲಿ ಭೋರ್ಗರೆಯುತಲಿರುತಿರೆ ॥

ಧಿಂ ದಿಂ ಧಿಮಿಕಿಟ ಧಿಮಿಕಿಟ ಧಿಮಿಧಿಮಿ ।
ಧಿಂಧಾ ತಿರಕಿಟ ತಿರಕತ ಗದುಗನ ॥

ವೃಂದಾರಕ ಸಂದೋಹವು ಬಗೆಬಗೆ
ವೃಂದವಾದ್ಯಗಳಂದದಿ ನುಡಿಯಲು ॥ 1 ॥

ಫಣಿಫಣಗಣಗಳು ಪೂತ್ಕರಿಸಲು ಫಣಿಮಣಿ
ಗಣಗಳ ಥಳಥಳ ಬೆಳಕಿನ ಸೆಳೆಗಳು ।
ಕುಣಿಕುಣಿದಾಡುವ ಗಣಗಳ ಮಧ್ಯದಿ
ಫಣಿಭೂಷಣ ಶಿವ ಮೈಮನ ಮರೆತು ॥ 2 ॥

ಕಿಡಿಯೊಡೆಯಿತು ನಡುಗಣ್ಣಿನ ಕುಡಿಯಲಿ
ಮಿಡಿಫಣಿಗಳು ಜಡೆಯಡಿ ಅಡಗುತಲಿರೆ ।
ಕಡು ಕೆಂಜೆಡೆಗಳ ಗಢಣವು ಬಿರಿಯಲು
ಗಡಡಮರುಗ ಡಮಡಮ ಬಾರಿಸಿ ॥ 3 ॥

ಅಂಬುಧಿ ಯುಗಿ ಯುಗಿ ಕುಂಬಿಣಿ ಥಕಥಕ
ಅಂಬರದಲಿ ಕಾದಂಬಿನಿ ಯೋಡಳು ।
ಭಂ ಭಂ ಭಂ ಭಂ ಶಂಖವನೂದಲು
ತ್ರ್ಯಂಬಕ ಗೌರೀ ಚಿಂಬಕ ಧಿತ್ತೈ ॥ 4 ॥

ಸೋಮಕಲಾನಿಧಿ ಕಾಮನಿವಾರಕ
ರಾಮನಾಮ ಮಧು ಪ್ರೇಮಿ ಮಹೇಶ್ವರ ।
ವಾಮದೇವ ಗಿರಜಾಧವ ಕೆಂಭಾವಿ ಭೀಮನೊಡೆಯ
ರಾಮನ ಒಲಿಸಲು ॥ 5 ॥

. . .

## ಶ್ರೀ ರಾಮಚಂದ್ರವಿಠಲದಾಸರ ರಚನೆ

ರುದ್ರ ಮಹದೇವ ವೀರಭದ್ರ
ಭದ್ರ ಮಾರ್ಗೋಪದೇಶಿ ಅದ್ರಿಕುವರಿ ವಲ್ಲಭ ॥ ಪ ॥

ಕ್ಷುದ್ರ ಖಳರ ಉಪದ್ರವ ಪರಿಹರಿಸಿ
ಉದ್ರೇಕ ಮಾಡು ಸುಜ್ಞಾನ ಭಕ್ತಿ ವೈರಾಗ್ಯವ
ಕದ್ರುಜಧಾರಿ ರೌದ್ರ ಮೂರುತಿಯೆ ॥ ಅ.ಪ. ॥

ಪೊಂದಿಸು ಹರಿಭಕ್ತರ ಸಂದಣಿ । ತ್ರಿಶೂಲಪಾಣಿ
ವಂದಿಪೆನು ಸುರಾಗ್ರಣಿ
ಬಂದಿಹ ವ್ಯಾಧಿಯ ಕಳೆಯೊ
ಕಂದರ್ಪಹರ ಕರುಣಾಕರ ಶಿವನೆ ॥ 1 ॥

ದಾತ ಸಂಭೂತ
ಭೂತಗಣಾಧೀಶ ವಿಖ್ಯಾತ
ವಾತನೊಡೆಯನ ಗುಣ ಸಂಪ್ರೀತಿಯಲಿ ಪೊಗಳುವಂತೆ
ಆತುರಮನ ನೀಡೊ ಯಾತರವನಲ್ಲವೊ ॥ 2 ॥

ನಿಟಿಲಾಕ್ಷಾಂಧಕಾಸುರ ಸಂಹಾರಿ । ಜಟಮಕುಟಧಾರಿ
ಸ್ಪಟಿಕ ಹಾರಾಲಂಕಾರಿ
ವಟು ವಿಜಯ ರಾಮಚಂದ್ರವಿಠಲನ ಸಂ-
ಪುಟದೊಳು ನಟಿಪಂತೆ ಪಟುತರ ಮಾಡೋ ॥ 3 ॥

## ನರ ಪ್ರಸನ್ನವಿಠಲದಾಸರ ರಚನೆ

ಹರ ಹರ ಗೌರಿ ಮನೋಹರ ಶಿವಶಂಕರ
ಕರುಣದಿ ಪಾಲಿಸು ಶಂಭೋ ಶಿವಶಂಕರ ॥ ಪ ॥

ಜಲಜನಾಭನ ಸುತನವೈರಿಯೆ
ಫಾಲನಯನದಿ ಆರು ಕುವೈರಿ-
ಗಳ ಅತಿವೇಗದಲಿ ಧಮನಿಸಿ ಸಲಹೋ ನಂದೀಶ ।
ಚೆಲುವಮೂರುತಿ ಇಂದುಶೇಖರ
ವೇಳೆಯಲಿ ಬಂದು ಮನದ ವ್ಯಾ-
ಕುಲವಳಿಸಿ ಪೊರೆಯೋ ಹಿಮಗಿರಿನಿವಾಸ ರಜನೀಶ ॥ 1 ॥

ನಮಿಸಿ ಬೇಡುವೆ ಸುಜನಪಾಲನೆ
ಪ್ರೇಮದಿಂದಲಿ ರಕ್ಷಿಸೆಮ್ಮನು
ಕಾಮಿತಪ್ರದ ವಾಮದೇವ ಭವ ನಟಶೇಖರನೆ ।
ಡಮರುಗಶೂಲಧರ ಉಮೆಯರಸ
ನೇಮದಿಂದ ಸಿರಿರಮಣನ ಅತಿ
ಸುಮಂಗಳ ಲೀಲೆ ಪಾಡುವ ಸುಖವನ್ನು ಕೊಡು ಶಿವನೆ ॥ 2 ॥
ಸುಜನ ಸುರಮುನಿಗಣ ನುತ ಚರಣ
ಭಜಿಸುವೆ ತವಚರಣ ಅಜಸುತನೆ
ನಿಜಮತಿ ಕ್ರಮದಿಂದ ಪಾಲಿಸು ಮೂಜಗವಂದ್ಯನೆ ।
ಗಜಮುಖಜನಕನೆ ಗುಪಿತವಿದ್ಯ-
ಯ ಜಾವ ಜಾವಕೆ ಮನಕೆ ಕೊಟ್ಟು
ಅಜಪಿತ ನರಪ್ರಸನ್ನವಿಠಲನ ಭಕುತಿಯ ಕೊಡಿಸೋ ॥ 3 ॥

. . .

## ವೇದವಿಠಲದಾಸರ ರಚನೆ

ಉಮಾಪತಿ ಮಂಗಳಕರ ಮಲ್ಲಿಕಾರ್ಜುನ ।
ಸೋಮಧರ ನೀಲಕಂಠ ಶಿವ ಹರಹರ ॥ ಪ ॥

ಕಾಮವೈರಿ ಶ್ರೀರಾಮಚಂದ್ರ ಭಕುತ ।
ತಾಮಸ ಗುಣ ಪ್ರೇರಕ ಹರಹರ ॥ 1 ॥

ಶಂಭೋ ಶಂಕರ ರಿಪುನಾಶಕ ।
ಅಂಬುಜಾರಮಣಪ್ರಿಯ ಹರಹರ ॥ 2 ॥

ಮಹಾದೇವ ಶರ್ವಗಣಪಿತ ನಂದಿ– ।
ವಾಹನ ಗಜಚರ್ಮಾಂಬರ ಹರಹರ ॥ 3 ॥

ಸಂಸಾರ ದುಃಖ ಭಂಜನ ಗೌರಿರಮಣ ।
ವ್ಯಾಸ ಗುರುಗಳ ನೀತ ಪುತ್ರ ಶುಕಮುನಿ ಹರಹರ ॥ 4 ॥

ಅನುಭವಕೆ ಕೊಡು ಹರಿ ಭಕುತಿ ಭಾಗವತೋತ್ತಮ ।
ಮನಸು ನಿಲ್ಲಿಸು ವೇದವಿಠಲನಲಿ ಹರಹರ ॥ 5 ॥

. . .

ವಿಶಾಲಾಕ್ಷಿ ನುತ ಶಿವಶಂಕರ ।
ತ್ರಿಶೂಲಪಾಣಿ ಸಂಕಟ ಹರ ॥ ಪ ॥

ಅಜಭವ ಸುತ ವೈನತೇಯ– ।
ಅಜಗರದೇವ ಸಮ ಭುಜಗಭೂಷಣ ॥ 1 ॥

ಲಂಬೋದರ ಷಣ್ಮುಖ ಜನಕ ।
ಸಾಂಬಸದಾ ಶಿವ ತಾಮಸ ಪ್ರೇರಕ ॥ 2 ॥

ಕಾಲಕೂಟ ವಿಷಪಾನ ನೀಲಕಂಠ ।
ಅಲವಬೋಧಗುರು ಪ್ರೀತಿ ಪಾತ್ರ ॥ 3 ॥

ತ್ರಿಪುರಾಸುರ ನಾಶಕ ನಿರಂಜನ ರಂಜಕ ।
ತಾಪಸಿಗಳ ವಯೂನ ತ್ರಯಂಬಕ ॥ 4 ॥

ಗಣ್ಯದೇವ ದೇವವರೇಣ್ಯ ಮಹಿತ ಭವಾ– ।
ರಣ್ಯ ಕಳೆಯುವ ವೇದವಿಠಲನ ಭಕುತೆ ॥ 5 ॥

॥ ಶ್ರೀಕೃಷ್ಣಾರ್ಪಣಮಸ್ತು ॥

## ॥ ಉಂಡಾರು ಶ್ರೀನಿವಾಸಚಾರ್ಯ ಸಂಗೃಹೀತ ಭಾವಿಸವೀರಣ್ಯೈಃ ತತ್ರ ತತ್ರ ಪ್ರೋಕ್ತ – ಶಿವನಾಮಾವಳೀ ಸ್ತೋತ್ರ ರೂಪಂ ॥

ವ್ಯಾಸ ಹಯಾಸ್ಯಂ ನತ್ವಾ ಪೂರ್ಣಪ್ರಜ್ಞಾದಿ ಸದ್ಗರೂನ್ ।
ಶಿವನಾಮಾವಳೀಂ ಸಂಗೃಹ್ಣಾಮೋ ಯಥಾಶಕ್ತಿ ಯಥಾಮತಿ ।
ಗಂಗಾಧರಂ ಜಟಾಜೂಟವಿನ್ಯಸ್ತೇನ್ದುಕಲೋಜ್ವಲಮ್ ।
ಪಂಚವಕ್ತ್ರಂ ತ್ರಿನೇತ್ರಂ ಚ ಊರ್ಧ್ವಪುಣ್ಡ್ರಧರಂ ನುಮಃ ।
ಚಕ್ರಶಂಖಾಂಕಿತಭುಜದ್ವಯಂ ಶುಚಿಸ್ಮಿತಂ ಸದಾ ನುಮಃ ।
ಪದ್ಮಾಕ್ಷತುಳಸೀಮಾಲಾವಿದ್ಯೋತಿತಶಿರಂ ನುಮಃ ।
ಅಹೀಶಭೂಷಣಂ ನೀಲಗ್ರೀವಂ ಸ್ಫಟಿಕಸನ್ನಿಭಂ ।
ಮೃಗಶೂಲವರಾಭೀತಿಹಸ್ತಂ ಸಮ್ಪ್ರಣಮಾಮ್ಯಹಮ್ ।
ಗೌರೀಮನೋಹರತನುಂ ಗೌರನನ್ದೀಶ ವಾಹನಮ್ ।
ಹರೇಃ ಪ್ರಿಯಮಘಹಾರಿಣಂ ಗಿರೀನ್ದ್ರವಾಸಿನಂ ಹರಮ್ ।
ಸದಾಧ್ಯಾತೃಬುಧಾಭೀಷ್ಟ ಪ್ರದಾನೈಕಧುರನ್ಧರಮ್ ।
ತ್ರಿಪುರಾಸುರಸಂಹಾರಿಣಂ ಪಾರ್ವತೀಶಂ ವಿಚಿನ್ತಯೇತ್ ।
ಸತಾಂ ವಶಂ ಫಣೀನ್ದ್ರಭೂಷಂ ಶೂರಂ ತ್ರಿಶೂಲಧಾರಿಣಂ ।
ವಿಧಿಪುತ್ರಂ ದೀನಶರಣಂ ವಿಶಾಲನೇತ್ರಂ ಸಂಸ್ಮರೇತ್ ।
ವ್ಯೋಮತೀರ್ಥಮೌಳಿನಂ ಕೃಷ್ಣಕಿಂಕರಮಾನ್ತರೇ ಚಿನ್ತಯೇತ್ ।
ದಿನನಾಥದೀಪ್ತಾರಂ ಪಶುಪತಿಂ ತೀರ್ಥಶೋಭಿತಮಸ್ತಕಮ್ ।
ತ್ರಿಶೂಲಿನಂ ತ್ರಿಲೋಚನಂ ವಿಷ್ಣುನೋಜ್ಜೀವಿತಂ ತಥಾ ।
ಪ್ರವರ್ಗ್ಯಾಹುತಿತುಷ್ಟಾರಂ ಗಿರೀಶಂ ಶ್ಮಶಾನಚಾರಿಣಮ್ ।
ನಿತ್ಯಂ ನೃಕಪಾಲಕರಂ ನಾಗಭೂಷಣಂ ತಥಾ ಸಂಭಜೇತ್ ।
ಗೌರೀಪತಿಂ ವೈಷ್ಣವಧುರನ್ಧರಂ ಶಂಭುಂ ಅಹಂ ಚಿಂತಯೇ ।
ವಿಷ್ಣುಪದಸ್ಯ ಧ್ಯಾತಾರಂ ವಿಷ್ಣ್ವಂಘ್ರ್ಯತೀರ್ಥನಿಷೇವಣಂ ।
ಉಮಾಪತಿಂ ಧೂರ್ಜಟಿನಂ ಮಹಾದೇವಂ ಸಂಸ್ಮರೇತ್ ।
ಶಶಿಖಣ್ಡಧರಂ ರಾಮಪಾದಕಿಂಕರಂ ತಥಾ ಸಂಸ್ಮರೇತ್ ।
ಶಂಕರಂ ನೀಲಕಣ್ಠಂ ಚ ಅರ್ಧನಾರೀಶ್ವರಂ ತಥಾ ।
ಇಲಾವೃತಾಖ್ಯಖಣ್ಡಸ್ಥಂ ತೀರ್ಥಸೇವಿನಂ ಸಂಭಜೇತ್ ।

ಮಹೇಶಂ ಶ್ರೀಕಣ್ಠಂ ಚ ಭಸ್ಮಾನುಲಿಪ್ತಾಂಗಂ ಸಂಸ್ಮರೇತ್ ।
ದಿಗಮ್ಬರಂ ಗಂಗಾಧರಂ ಜ್ಞಾನೋಪದೇಷ್ಟಾರಂ ವಿಚಿನ್ತಯೇತ್ ।
ವಾದಿರಾಜೋಕ್ತ ಶಿವನಾಮಾವಳೀ ಸಂಗೃಹ್ಯಾತ್ರ ಪ್ರದರ್ಶಿತಾ ।
ಉಣ್ಡಾರು ಶ್ರೀನಿವಾಸೇನ ಪ್ರೀತ್ಯೈ ಹರಿತದ್ ದಾಸಯೋಃ ।
ಪಠನೇನಾನೇನ ರುದ್ರೋಽಸೌ ವೈರಾಗ್ಯಭಕ್ತಿಂ ವಿತರತು ।

॥ ಇತ್ಯುಣ್ಡಾರು ಶ್ರೀನಿವಾಸಾಚಾರ್ಯ ಸಂಗೃಹೀತ ಭಾವಿಸಮೀರಣೈಃ ತತ್ರ ತತ್ರ ಪ್ರೋಕ್ತ ಶಿವನಾಮಾವಳೀ ಸ್ತೋತ್ರ ರೂಪಂ – ಸಂಪೂರ್ಣಮ್ ॥





ಚಂದ್ರಶೇಖರ ಸಮನಸೇಂದ್ರ ಪೂಜಿತ ಚರಣಾ-
ಹೀಂದ್ರ ಪದಯೋಗ್ಯ ವೈರಾಗ್ಯ ।
ವೈರಾಗ್ಯ ಪಾಲಿಸಮರೇಂದ್ರ ನಿನ್ನಡಿಗೆ ಶರಣೆಂಬೆ ॥

*-- ತತ್ವಸುವ್ವಾಲಿ, ಶ್ರೀ ಜಗನ್ನಾಥದಾಸರು*

